ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೧೭

# ಕರ್ನಾಟಕ ಕಾದಂಬರಿ

ವಿ. ಸೀತಾರಾಮಯ್ಯ, ಎಂ.ಎ.






ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
ಮೈಸೂರು
೧೯೪೦



ಬೆಲೆ: ೩ ಆಣೆ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೧೭

# ಕರ್ನಾಟಕ ಕಾದಂಬರಿ

ಪಿ. ಸೀತಾರಾಮಯ್ಯ, ಎಂ.ಎ.




ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

೧೯೪೦

# ಮುನ್ನುಡಿ

ಮೈಸೂರು ವಿಶ್ವವಿದ್ಯಾನಿಲಯದ ಚಾನ್ಸಲರವರಾದ ಆಳುವ ಮಹಾಸ್ವಾಮಿಯವರು ಮೊದಲನೆಯ ಸೆನೆಟ್ ಸಭೆಯ ಪ್ರಾರಂಭೋತ್ಸವದ ಭಾಷಣದಲ್ಲಿಯೂ, ಪುನಃ ಮೊದಲನೆಯ ಕಾನ್ವೊಕೇಷನ್ ಮಹೋತ್ಸವದ ಭಾಷಣದಲ್ಲಿಯೂ ವಿಶ್ವವಿದ್ಯಾನಿಲಯದ ಪಾಲಿಗೆ ಹಲವು ಕರ್ತವ್ಯಗಳನ್ನು ಅಪ್ಪಣೆಮಾಡಿದರು. ಅವುಗಳಲ್ಲಿ ವಿಶೇಷವಾದವು ಇವೆರಡು: ಒಳ್ಳೆಯ ಕನ್ನಡದಲ್ಲಿ ಬರೆದ ಪುಸ್ತಕಗಳ ಪ್ರಕಟನೆ, ಹಾಗೂ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ. ಮತ್ತು ಶ್ರೀಮನ್ಮಹಾರಾಜರವರ ಪ್ರಜೆಗಳಲ್ಲಿ ಯಾರು ಕಾರಣಾಂತರಗಳಿಂದ ಕ್ರಮಬದ್ಧವಾದ ಶಿಕ್ಷಣಶಿಸ್ತುಗಳಲ್ಲಿ ಭಾಗವಹಿಸಿ ಪರೀಕ್ಷೆಗಳಿಗೆ ಕೂಡಲು ಶಕ್ತರಲ್ಲವೋ ಅಂಥವರಲ್ಲಿ ಜ್ಞಾನಪ್ರಸಾರ ಮಾಡುವುದು; ಅಲ್ಲದೆ ಮೈಸೂರು, ಬೆಂಗಳೂರು ಈ ಎರಡು ಹಿರಿಯ ಪಟ್ಟಣಗಳಲ್ಲಿ ದೊರಕುವ ವಿದ್ಯಾಭ್ಯಾಸಾನುಕೂಲ್ಯಗಳನ್ನುಪಡೆದಿಲ್ಲದ, ಸಂಸ್ಥಾನದ ದೂರಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಉಚ್ಚ ವರ್ಗದ ಸಂಸ್ಕೃತಿಯನ್ನು ಹರಡುವುದು.

ಈ ಇಪ್ಪತ್ತುಮೂರು ವರ್ಷಗಳಿಂದಲೂ ವಿಶ್ವವಿದ್ಯಾನಿಲಯವು ಈ ಎರಡು ಮುಖ್ಯ ಧ್ಯೇಯಗಳನ್ನು ತನ್ನ ಮುಂದೆ ತಪ್ಪದೆ ನಿಲ್ಲಿಸಿಕೊಂಡಿದೆ. ಅದರ ಕನ್ನಡ ಪ್ರಕಟನ ಶಾಖೆಯು ಕೆಲವು ಪ್ರಸಿದ್ಧ ಹಳಗನ್ನಡ ಕಾವ್ಯಗಳನ್ನು ಎಚ್ಚರಿಕೆಯಿಂದ ಪರಿಷ್ಕರಿಸಿ ಅಚ್ಚು ಹಾಕಿಸಿದೆ; ಅಲ್ಲದೆ, ಸಾಹಿತ್ಯ ವಿಜ್ಞಾನ ವಿಷಯಗಳನ್ನು ಕುರಿತ ಕೆಲವು ಲಘು ಪುಸ್ತಕಗಳನ್ನೂ ಹೊರತಂದಿದೆ. ಪ್ರಚಾರೋಪನ್ಯಾಸ ಸಮಿತಿಯವರು ಸಂಸ್ಥಾನದ ಎಲ್ಲ ಭಾಗಗಳ ಅನೇಕ ಕೇಂದ್ರಗಳಲ್ಲಿ ಹೆಚ್ಚಾಗಿ ಕನ್ನಡದಲ್ಲಿಯೇ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚಿಗೆ ಒಂದು ಫಲದಾಯಕವಾದ ಕಾರ್ಯಕ್ರಮ ಬೆಳೆದು ಬರುತ್ತಿದೆ. ವಿಷಯ ಒಂದೊಂದಕ್ಕೆ ಒಂದೊಂದರಂತೆ ಬಿಡಿ ಉಪನ್ಯಾಸ

ವನ್ನು ಕೊಡಿಸುವುದರ ಜೊತೆಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದ ಸಹಕಾರದಿಂದ ಸಂಸ್ಕೃತಿ ಸಪ್ತಾಹಗಳೆಂದು ಈಗಾಗಲೇ ಕರೆಯಲ್ಪಡುತ್ತಿರುವ ಉಪನ್ಯಾಸಮಾಲೆಗಳನ್ನು ಇಡಿಸಲಾಗುತ್ತಿದೆ. ಒಂದೇ ಊರಿನಲ್ಲಿ ಐದಾರು ದಿನ ಭಾಷಣ ಕಾವ್ಯವಾಚನ ಸಂಗೀತಾದಿಗಳು ಜರುಗುತ್ತವೆ; ಉಪನ್ಯಾಸಗಳು ಸಾಹಿತ್ಯ ವಿಜ್ಞಾನ ಸಮಾಜವೆಲ್ಲಕ್ಕೂ ಸಂಬಂಧಿಸಿರುತ್ತವೆ. ಈ ಸಪ್ತಾಹಗಳು ನೆರವೇರಿದ ದೊಡ್ಡಬಳ್ಳಾಪುರ, ದಾವಣಗೆರೆ, ಕೋಲಾರ ಮುಂತಾದ ಎಲ್ಲ ಕಡೆಗಳಿಂದಲೂ ಅವಕ್ಕೆ ಬಹಳ ಮನ್ನಣೆ ದೊರೆತಿದೆ.

ಈಗ ಅತಿ ಹೊಸದಾದ ಏರ್ಪಾಡಾವುದೆಂದರೆ: ಒಂದೆರಡು ಊರುಗಳನ್ನು ಆರಿಸಿಕೊಂಡು, ಅಲ್ಲಿಗೆ ಒಂದು ವರ್ಷದಲ್ಲಿ ಹಲವು ಬಾರಿ ಹೋಗಿ, ಕೆಲವು ವಿಷಯಗಳಲ್ಲಿ ಒಂದೊಂದನ್ನೂ ಕುರಿತು ನಾಲ್ಕಾರು ಉಪನ್ಯಾಸಗಳನ್ನು ಹೇಳುವ ಯೋಜನೆ. ಅದರಿಂದ ಆ ಊರುಗಳ ಜನರಿಗೆ ಅನಲ್ಪಕಾಲ ಎಡೆಬಿಡದೆ ಜ್ಞಾನಬೋಧೆ ಸಿಕ್ಕುವುದು. ಪ್ರತ್ಯಕ್ಷ ಕೇಳಿ ಉಪಯೋಗ ಪಡೆದ ಸಭಿಕರ ಗುಂಪಿನಿಂದ ಆಚೆಗೂ ಕೂಡ ಈ ಭಾಷಣಮಾಲೆಗಳ ಪ್ರಯೋಜನ ಹರಡಲೆಂಬ ಉದ್ದೇಶದಿಂದ ಅವುಗಳನ್ನು ಈ ರೀತಿ ಚಿಕ್ಕ ಹೊತ್ತಗೆಗಳಾಗಿ ಪ್ರಕಟಿಸಿದೆ.

ನಮ್ಮ ಘನ ಪ್ರಭುಗಳವರು ನಮ್ಮ ವಿಶ್ವವಿದ್ಯಾನಿಲಯಕ್ಕೆ ಎರಡು ಪವಿತ್ರ ಕರ್ತವ್ಯಗಳನ್ನು ನೇಮಿಸಿರುವರಷ್ಟೆ: ಸುಲಭ ಸಮಂಜಸ ಕನ್ನಡದಲ್ಲಿ ರಚಿಸಿದ ಗ್ರಂಥಗಳ ಪ್ರಕಟನೆ; ಜನತೆಯಲ್ಲಿ ಉತ್ತಮ ಬಗೆಯ ಸಂಸ್ಕೃತಿಯ ಪ್ರಸಾರ. ಆ ಎರಡು ಕರ್ತವ್ಯಗಳನ್ನೂ ಈ ಮಾರ್ಗವಾಗಿ ಒಂದೇ ಸಾರಿ ಸಾಧಿಸಬಹುದೆಂಬುದೇ ಹೀಗೆ ಉಪನ್ಯಾಸಗಳನ್ನು ಕೊಟ್ಟು, ಲಘು ಪುಸ್ತಕಗಳನ್ನು ಸಿದ್ಧಮಾಡಿದವರ ನಿರೀಕ್ಷೆ ಮತ್ತು ಹೆಬ್ಬಯಕೆ.

ವಿಶ್ವವಿದ್ಯಾನಿಲಯ, ಮೈಸೂರು,
೨೯—೫—೧೯೩೯.

ಎನ್. ಎಸ್. ಸುಬ್ಬರಾವ್.

## ವಿಷಯಾನುಕ್ರಮಣಿಕೆ

# ಕರ್ನಾಟಕ ಕಾದಂಬರಿ

## I. ಕಥೆ, ಕವಿ, ಕೃತಿ

ಉಜ್ಜಯಿನಿಯ ಚಕ್ರವರ್ತಿ ತಾರಾಪೀಡ. ಆತನ ರಾಣಿ ವಿಲಾಸವತಿದೇವಿ, ಮಂತ್ರಿ ಶುಕನಾಸ. ರಾಜನೂ ಮಂತ್ರಿಯೂ ಆಪ್ತರಾದ ಗೆಳೆಯರು. ಬೇರೆ ಎಷ್ಟೇ ಸೌಭಾಗ್ಯವಿದ್ದರೂ ಮಕ್ಕಳಿಲ್ಲದ್ದು ಒಂದೇ ರಾಜನ ಬಹುಕಾಲದ ಕೊರತೆ. ಕಡೆಗೆ ಒಬ್ಬ ಮಗ ಹುಟ್ಟುವನು. ಅದೇ ದಿನ ಮಂತ್ರಿಗೂ ಗಂಡು ಮಗು ಆಗುವುದು. ರಾಜಕುಮಾರನಿಗೆ ಚಂದ್ರಾಪೀಡನೆಂದೂ ಮಂತ್ರಿಯ ಮಗನಿಗೆ ವೈಶಂಪಾಯನನೆಂದೂ ಹೆಸರಿಡುವರು. ಒಡನಾಡಿ ಒಡನೋದಿ ಪರಸ್ಪರ ವಿಶ್ವಾಸಕ್ಕೆ ನೆಲೆಯಾಗಿ ಹುಡುಗರು ಬೆಳೆಯುವರು. ಸೂರ್ಯನೂ ಹಗಲೂ ಎಡೆಬಿಡದೆ ಇರುವಂತೆ ಅಗಲದೆ ಇರುವರು. ಮಗನ ವಿದ್ಯಾಭ್ಯಾಸ ಮುಗಿದ ಮೇಲೆ ಪಾರಸೀಕಾಧೀಶನು ತನಗೆ ಒಪ್ಪೈಸಿದ್ದ ಇಂದ್ರಾಯುಧವೆಂಬ ದಿವ್ಯಾಶ್ವವನ್ನು ಕಳಿಸಿಕೊಟ್ಟು ಅವನನ್ನು ದೊರೆ ಊರಿಗೆ ಕರಸಿಕೊಳ್ಳುವನು. ಮಗನ ರೂಪು, ಗುಣ, ಶಕ್ತಿ ಏಳಿಗೆಗೊಂಡುದನ್ನು ನೋಡಿ ತಾಯಿ ತಂದೆಯರಿಗೆ ಸಂತೋಷ. ಕುಮಾರರು ಮಹಾರಾಣಿಯನ್ನು ನೋಡಲು ಹೋದಾಗ ಆಕೆ 'ಸಮಸ್ತ ಸತ್ಕಳಾವನಿತೆಯಡೊಳ್ ಮಹೋತ್ಸವದಿ ಕೂಡಿದಿರ್, ಇಂತಿರೆ ಬೇಗದಿಂ ವಧೂಜನವ ಒಡಗೂಡಿಂ' ಎಂದು ಅಕ್ಕರೆಯಿಂದ–ಈ ಹುಟ್ಟಿನಲ್ಲಿ ಅದು ಶಕ್ಯವಿಲ್ಲವೆಂಬುದನ್ನು ತಿಳಿಯದೆ ಆಕೆ, ಪಾಪ,–ಹರಸುವಳು. ಬಳಿಕ ಅವರು ಬೀಡಾರಗಳಿಗೆ ಹೋಗುವರು. ತಾನೂ ಅವರೆಗೂ

ಸಾಕಿದ್ದ ಕುಲೂತೇಶ್ವರನ ಮಗಳಾದ ಪತ್ರಲೇಖೆಯನ್ನು ರಾಣಿ ಮಗನ ಸೇವೆಗೆ ಕಳಿಸುವಳು. ಬೆಳೆದ ಮಗನಿಗೆ ಯುವರಾಜ ಪಟ್ಟ ಕಟ್ಟಬೇಕೆಂದು ಯೋಚಿಸಿ ರಾಜನು ಆ ಉತ್ಸವವನ್ನು ಬೇಗನೆ ನೆರವೇರಿಸುವನು.

ಮುಂದೆ ಯುವರಾಜನು ದಿಗ್ವಿಜಯಕ್ಕಾಗಿ ಸೈನ್ಯದೊಡನೆ ಹೊರಡುವನು. ಪತ್ರಲೇಖೆಯೂ ವೈಶಂಪಾಯನನೂ ಜೊತೆಗಿರುವರು. ಇಳೆಯನ್ನೆಲ್ಲ ಗೆದ್ದು ಉತ್ತರ ಮೇರೆಯ ಕೈಲಾಸ ಪರ್ವತದ ಬಳಿಯ ಸುವರ್ಣಪುರದಲ್ಲಿ ಬೀಡುಬಿಡುವರು. ಸೈನ್ಯ ವಿಶ್ರಮಿಸುತ್ತಿರಲು ಯುವರಾಜನು ಬೇಟೆಯ ವಿನೋದದಲ್ಲಿ ಸುತ್ತಾಡುತ್ತಿರುವಾಗ ದೂರದಲ್ಲಿ ಒಂದು ಜೋಡಿ ಕಿನ್ನರಗಳನ್ನು ಕಾಣುವನು. ಹಿಡಿಯುವ ಆಸೆ ಬಹಳವಾಗಲು ಅವನ್ನು ಅಟ್ಟಿ ಬಹು ದೂರ ಹೋಗುವನು. ಇಂದ್ರಾಯುಧದ ವೇಗಕ್ಕೆ ಹಿಂದೆಬಿದ್ದು ಉಳಿದ ಪರಿವಾರ ಕಾಣದಾಗುವುದು. ಇತ್ತ ಮನುಷ್ಯರ ಪರಿಚಯವಿಲ್ಲದ ಕಿನ್ನರಗಳು ಹೆದರಿ ಜೀವ ಭಯದಿಂದ ಮುಂದೆಮುಂದೆ, ಬಹುದೂರ ಓಡಿ ಕಡೆಗೆ ಕೈಲಾಸ ಶಿಖರವೇರಿ ಮರೆಯಾಗಲು ರಾಜಕುಮಾರನಿಗೆ ವ್ಯಾಕುಲವಾಗುವುದು. ಇಂಥ ಅವಿವೇಕಕ್ಕೆ ಏಕೆ ತೊಡಗಿದೆನೆಂದು ಯೋಚಿಸುತ್ತ ಬೇಗ ಪಾಳೆಯಕ್ಕೆ ಹಿಂದಿರುಗಬೇಕು ಎಂದು ಯೋಚಿಸಿ ನೀರು ಕುಡಿದು ಸ್ವಲ್ಪ ದಣಿವಾರಿಸಿಕೊಂಡು ಹೋಗೋಣವೆಂದು ಅಚ್ಛೋದ ಸರೋವರದ ತಡಿಗೆ ಬರುವನು. ಅಲ್ಲಿ ವಿಶ್ರಾಂತಿ ಪಡೆಯುತ್ತಿರಲು

ಮುರಿದ ಕೊರಲ್, ಬಳಲ್ದು-ಎಳಪಲಾಟಪ ಮೆಯ್, ಕಡೆವಾಯ
ಲೋಳೆಯೊಳ್
ಪೊರೆದುಗುತರ್ಪ ಪಚ್ಚಪಸಿಯ-ಅಚ್ಚಗರುಂಕೆ, ಮರಲ್ದ ದಿಟ್ಟಿ, ಕ

ತ್ರ೦ವೊಸೆಗೊಂಡು–ಎಳಲ್ವ ಕಿವಿ ಸೂಚಿಸಿದಪ್ಪುದು ಸೋಲ್ತ ಭಾಸಮಾಂ
ತುರಗಂ-ಇವೇನನ್–ಆಲಿಸುತುಂ–ಇರ್ದಪುದೆಂದು —

ವೀಣಾವಿದ್ಯಾಧರನಾದ ಅವನು ಭಾವಿಸಿ ನೋಡುತ್ತಿರುವಲ್ಲಿ ವೀಣೆಯ ಇಂಚರ ಆತನಿಗೂ ಕೇಳಿಸುವುದು. ಇಂದ್ರಾಯುಧ ವನ್ನೇರಿ ಆ ಎಡೆಗೆ ಹೋಗಿ ನೋಡುವನು! ಹದಿನೆಂಟು ವರ್ಷದ ಚೆಲುವೆ ತಾಪಸಿಯೊಬ್ಬಳು ಸ್ಫಟಿಕದ ಶಿವಲಿಂಗವನ್ನು ಆರಾಧಿಸುತ್ತ, ಭಕ್ತಿಯೆ ಭವಸನ್ನಿಧಿಯಲ್ಲಿ ರೂಪುಗೊಂಡಂತೆ ಇರುವುದು ಕಂಡಿತು. ತಾನೆಲ್ಲಿ, ಕಿನ್ನರ ಜೋಡಿಯಲ್ಲಿ, ಸರೋವರ ಆಶ್ರಮಗಳೆಲ್ಲಿ, ದಿವ್ಯಾಂಗನೆಯೆಲ್ಲಿ, ಎಳವಯಸ್ಸಿನಲ್ಲಿ ನಿಷ್ಠುರ ತಪಸ್ಸಿದೇನು, ಎಲ್ಲ ಚೋದ್ಯವಾಗಿದೆ; ಕಿನ್ನರಗಳಂತೆ ನನ್ನನ್ನು ಕಂಡು ಈಕೆ ಮಾಯವಾಗದೆ ಇದ್ದರೆ ಎಲ್ಲವನ್ನೂ ತಿಳಿಯಬೇಕು ಎಂಬ ಕುತೂಹಲ ಉಂಟಾಗುವುದು. ಗಂಭೀರೆಯೂ ಊರ್ಜಿತಮತಿಯೂ ನಿರ್ಮಳೆಯೂ ಅಮಳ ಧೈರ್ಯ ಗುಣಾನ್ವಿತೆಯೂ ದೃಢ ಪಾಶುಪತವ್ರತೆಯೂ ಆಗಿ ಶಿವಪೂಜೆ ಮಾಡುತ್ತಿದ್ದ ಆಕೆಯಲ್ಲಿ ಆತನಿಗೆ ಗೌರವ ಹುಟ್ಟಿ ಗೀತಾರಾಧನೆ ಮುಗಿಯುವ ಒಂದು ಜಾವಕಾಲ ದೇವಾಲಯದ ಕಂಬಕ್ಕೆ ಒರಗಿನಿಂತು ಕಾದಿರುವನು.

ಆರಾಧನೆ ಮುಗಿದ ಕೂಡಲೆ ಸ್ವಾಗತಿಸಿ, ಆತನು ತನ್ನ ಅಭ್ಯಾಗತನಾಗಬೇಕೆಂದು ಆಕೆ ಹೇಳುವಳು. ಅವಳೊಡನೆ ಆಶ್ರಮಕ್ಕೆ ಹೋಗಿ ಹಣ್ಣುತಿಂದು, ನೀರು ಕುಡಿದು ಬಳಲಿಕೆ ಆರಿಸಿಕೊಳ್ಳುವನು. ಕುಮಾರನು ತನ್ನ ವೃತ್ತಾಂತವನ್ನು ಮೊದಲು ತಿಳಿಸಿ ಆಮೇಲೆ ಮರ್ಯಾದೆಯಿಂದ 'ಮನುಜಂಗೆ ಕೌತುಕಾವಹಂ ಇನಿತೊಂದು ಆಶ್ಚರ್ಯಂ, ಅದರಿನ್ ಇನ್ ಬೆಸಗೊಳ್ಳಲ್ಕೆ ಅನುಗೆಯ್ಯುತ್ತಿರ್ದಪುದು ಈ ಮನಂ; ದೇವಿ, ಪೇಳ

ಲ್ತೇಳ್ವಿಂ . . . ಪೊಸಜವ್ವನದ ಏಳ್ಗೆಯೊಳ್ ತಪಶ್ಚರಣಂ ಇದೇಂ? . . . ಕಾನನದೊಳ್ ಬಿಡವೆ ಒಬ್ಬಳ್ ಇರ್ಪುದೇಂ?' ಎಂದು ಕೇಳುವನು. ನೆನಪು ಯಾವುದೋ ಸತ್ಯವನ್ನು ಎಚ್ಚರಿಸಿದಂತಾಗಿರಬೇಕು: ಸಂಯಮದ ಮುದ್ರೆ ಒಡೆಯಿತು. ಶಾಂತಿ ಕರಗಿತು. 'ಈ ಶೋಕಮನ್ ಮಳ್ಗಿಸಲ್ ಇನ್ನಾರಾರ್ಪರ್' ನಾನೇಕೆ ಸುಮ್ಮನೆ ಆಕೆಯನ್ನು ಪ್ರಶ್ನೆ ಕೇಳಿದೆ ಎಂದು ಕುಮಾರನಿಗೆ ವ್ಯಥೆ ಉಂಟಾಗುವಷ್ಟು ಆಕೆ ಅಳವಿಲ್ಲದೆ ಅಳುವಳು. ಇಂತಹವರೂ ಅಳುವಂದ ಅದ್ಭುತ, ಎಂದು ಆತನು ಭಾವಿಸುತ್ತಿರಲು ಆಕೆ ಸಮಾಧಾನಗೊಂಡು 'ಗತಭಾಗ್ಯಳಾಗಿ, ಪತಿದುಃಖ ಭಾಜನೆಯಾದವಳ ವೃತ್ತಾಂತವನ್ನೇನು ಕೇಳುವೆ? ಕೇಳಬೇಕೆನಿಸಿದರೆ ಹೇಳುವೆನು' ಎಂದು ತನ್ನ ಕಥೆ ಹೇಳುವಳು.

೨. ಗಂಧರ್ವ ರಾಜ ಹಂಸನಿಗೆ ಗೌರಿಯೆಂಬ ಅಪ್ಸರೆ ರಾಣಿ. ಅವರಿಗೆ ಅಪರೂಪದ ಮಗಳಾಗಿ ಹುಟ್ಟಿದ ನನಗೆ ಮಹಾಶ್ವೇತೆ ಎಂದು ಹೆಸರಿಟ್ಟರು. ಮುದ್ದಿನಲ್ಲಿ ಬೆಳೆದು ಎಲ್ಲರಿಗೂ ಅಚ್ಚು ಮೆಚ್ಚಾದೆ. ವರ್ಷಕ್ಕೆ ವಸಂತ ಬರುವಂತೆ, ಗಿಡಕ್ಕೆ ಚಿಗುರು ಕಾಂತಿ ತರುವಂತೆ, ಚಿಗುರಿಗೆ ಹೂ ಪುಳಕಕೊಡುವಂತೆ ನನಗೆ ಯೌವನೋದಯವಾಯಿತು. ಒಂದು ದಿನ ಅಚ್ಛೋದ ಸರಸ್ಸಿಗೆ ತಾಯೊಡನೆ ಮಿಾಯಲು ಹೋದೆ. ತಾಯಿ ನೀರಿಳಿದಿದ್ದಾಗ ಸುತ್ತಲ ವಸಂತವನಭಾಗ್ಯವನ್ನು ನೋಡುತ್ತ ತಿರುಗಾಡಿದೆ. ದೂರದಿಂದ ಬಂದ ಒಂದು ಸುಗಂಧವೂ ಅದನ್ನು ಮುತ್ತಿದ್ದ ತುಂಬಿಗಳ ಝುಂಕಾರವೂ ಮನಸ್ಸನ್ನು ಸೆಳೆದುವು. ಒಂದೆರಡು ಹೆಜ್ಜೆಹೋಗಿ ನೋಡುವಲ್ಲಿ ಇಬ್ಬರು ಋಷಿಕುಮಾರರು ಬರುತ್ತಿದ್ದರು. ಮುಂದೆ ಬರುತ್ತಿದ್ದ ಕುಮಾರನ ಕೈಯಲ್ಲಿ ಜಪಸರ, ಕಮಂಡಲು; ಮೊಗ ಮಿಾಸೆ ಬಾರದಿದ್ದೂ ಸೊಗಯಿಸುವ

ಮುಖ ತುಂಬಿಗಳೆರಗದ ಹೊನ್ತಾವರೆಯಂತೆ ಇತ್ತು. ಆ ರೂಪು ಕಂಡೊಡನೆಯೆ ಮೋಹವುಂಟಾಯಿತು. ಆದರೆ ನನ್ನ ನಡತೆ ತಕ್ಕುದಲ್ಲವೆಂದೂ ತೋರಿತು. ಆದುದರಿಂದ ನನ್ನನ್ನು ನಾನೆ ಸಂತೈಸಿಕೊಂಡು ಮನಸ್ಸನ್ನು ಹಗುರ ಬಿಡಬಾರದು, ಬುದ್ಧಿ ಪರವಶವಾಗುವ ಮೊದಲೇ, ಋಷಿಕುಮಾರನು ಈ ಕಾಮವಿಕಾರವನ್ನು ಕಂಡು ಶಾಪಕೊಡುವ ಮುಂಚೆಯೇ ಅಲ್ಲಿಂದ ಹೊರಟು ಹೋಗಬೇಕು ಎಂದು ನಿಶ್ಚಯಿಸಿದೆ. ಇನ್ನೊಂದು ಕಡೆ ಪೂಜ್ಯರನ್ನು ಉಪೇಕ್ಷಿಸಬಾರದೆಂದೂ ಆತನಿಗೆ ನಮಸ್ಕಾರ ಮಾಡಿ ಹೋಗಬೇಕೆಂದೂ ಅನ್ನಿಸಲು ಬಳಿಗೆ ಹೋಗಿ ಅಕ್ಕರೆಯಿಂದ ನಮಸ್ಕರಿಸಿದೆ. ನನ್ನ ತಲೆ ಕೂದಲಲ್ಲಿ ಚಿನ್ನದ ಹೂಗಳು, ಕಿವಿಯಲ್ಲಿ ಕೋಮಲ ಪಲ್ಲವ ಕರ್ಣಪೂರ, ಹೆಗಲಲ್ಲಿ ಆಡುತ್ತಿರುವ ಮಣಿಕುಂಡಲ, ಮನಸ್ಸು ಆತನನ್ನು ಬಯಸುತ್ತಿದೆ, ಎವೆಯಿಡದ ಕಣ್ಣು ಆತನ ಮುಖ ಪತ್ತವೇ ಇದೆ. ಅಂಥ ಪ್ರಸಂಗದಲ್ಲಿ ಸುತ್ತಲ ಚೆಲುವೆಲ್ಲ ಸಂಚುಮಾಡಿತು. ವಸಂತ, ತಂಗಾಳಿ, ವನಶೋಭೆ, ಮನ್ಮಥ ಸಂಚುಗಾರರಾದರು. ನನಗೂ ದುಃಖ ಬರಬೇಕಾಗಿತ್ತು: 'ಗಾಳಿಗೊಡ್ಡಿದ ದೀಪಾಂಕುರದಂತೆ ತನ್ಮಾಸಿಯುಮಂ ಕಾಮಂ,-ಚಲಂ ಮಾಡಿದಂ.'

ಸೋಲು ಕಂಡಿತು. ಆಗ ಜೊತೆಯ ಕುಮಾರನನ್ನು ಕುರಿತವಳು ' ಈತನಾರು, ಹೆಸರೇನು ? ಈತನು ತೊಟ್ಟಿರುವ ಕರ್ಣಾವತಂಸ ಲೋಕಕ್ಕೆ ಹೊಸತು; ಯಾವ ಮರದ ಹೂಗೊಂಚಲಿಂದಾದದ್ದು ? ಎಂದು ಕುತೂಹಲದಿಂದ ಕೇಳಿದೆ. ನಾನೊಲಿದಾತ ಶ್ವೇತಕೇತು ಮುನಿಯ ಮಗ ಪುಂಡರೀಕನಂತೆ; ಆತನ ಗೆಳೆಯ ಕಪಿಂಜಲನಂತೆ; ಪುಂಡರೀಕನ

ಕಿವಿಯಲ್ಲಿದ್ದುದು ಪಾರಿಜಾತವಂತೆ. ಶಿವದರ್ಶನಕ್ಕಾಗಿ ಇವರು ಬರುತ್ತಿರಲು ದಾರಿಯಲ್ಲಿ ವನದೇವತೆ ಒಬ್ಬಳು ಬಂದು ಪುಂಡರೀಕನು ಎಷ್ಟು ಒಲ್ಲೆನೆಂದರೂ ಕೇಳದೆ ಆತನಿಗೆ ಮುಡಿಸಿ ಹೋಗಿದ್ದಳಂತೆ. ಕಪಿಂಜಲನು ಇದನ್ನು ತಿಳಿಸುತ್ತಿರಲು, ಪುಂಡರೀಕನು ನನ್ನನ್ನು ಕುರಿತು —

> ಎಳಸುತ್ತಿರ್ದಪೆ ಪುಷ್ಪಮಂಜರಿಗೆ, ಕೊಳ್ ಈಸುತ್ತಿದೇಕೆಂದು ಸಂ
> ಚಳಿಸುತ್ತಂ ನಿಜಕರ್ಣದಿಂ ತೆಗೆದು 'ಸೋಲ್ತೆಂಕೊಡುನೀನೆನ್ನೊಳ್' ಎಂ
> ದಳಿಮಾಲಾರವದಿಂದೆ ಪೇಳ್ವತೆರದಿಂ ಮತ್ಕರ್ಣದೊಳ್........
> ರಂಜಿಪ........ಪುಷ್ಪಮಂಜರಿಯನ್-ಆತ್ಮೌತ್ಸುಕ್ಯದಿಂದಿಕ್ಕಿದಂ

ಇನ್ನು ಹೇಳುವುದೇನು? ನನ್ನ ಕೆನ್ನೆಯ ನಸುಸೋಂಕಿನ ಒಂದು ಸುಖದಿಂದ ಅಧಿಕವಾಗಿ ಕಂಪಿಸುತ್ತಿರಲು ಕೈಯಿಂದ ಅಕ್ಷಮಾಲೆ ನಾಣ್ಬೆರಸಿ ಹೋಯಿತು. ಏನಾಯಿತೆಂಬುದರ ಅರಿವು ಆತನಿಗಿರಲಿಲ್ಲ. ಸರ ನೆಲಕ್ಕೆ ಬೀಳುವ ಮುಂಚೆ ಅದನ್ನು ಹಿಡಿದು ನನ್ನ ಕೊರಲಿಗೆ ಹಾಕಿಕೊಂಡು ಸುಖಪಟ್ಟೆ. ಇಷ್ಟರಲ್ಲಿ ನನ್ನ ಕೊಡೆವೂಳಿಗದಾಕೆ ಬಂದು, ದೇವಿಯರ ಸ್ನಾನವಾಯಿತು, ಮನೆಗೆ ಹೋಗಲಿದ್ದಾರೆ, ಮಜ್ಜನಕ್ಕೆ ಈಗಲೆ ನಡೆ ಎಂದು ಹೇಳಿ ಇಚ್ಛೆಯಿಲ್ಲದಿದ್ದರೂ ಅಲ್ಲಿಂದ ನನ್ನನ್ನು ಕೊಂಡುಹೋದಳು.

ಪುಂಡರೀಕನ ನಡತೆಯನ್ನು ನೋಡಿ ಕಪಿಂಜಲನು ಬಹುವಾಗಿ ಆಕ್ಷೇಪಿಸಿದನಂತೆ. ನಿನಗೀಗ ಇಂದ್ರಿಯದ ಡಾವರ ಎತ್ತಲಿಂದ ಬಂತು? ಇದು ಅನುರೂಪವಲ್ಲ, ಕೀಳರ ಮಾರ್ಗ ಎಂಬುದನ್ನು ವಿಚಾರಿಸದೆ ಸ್ವೈರಣೆ ಕೆಟ್ಟು, ಅರಿವು ಎತ್ತಹೋಯ್ತು ಎಂಬಂತೆ ಎದೆಗೆಟ್ಟು, ಮೆಯ್ ಅರಿಯದೆ ನೀನು ಹೀಗಿರಬಹುದೆ? ಇನ್ನಾದರೂ ಮನಸ್ಸನ್ನು ನಿಲ್ಲಿಸಿಕೊ ಎಂದನಂತೆ. ಪುಂಡರೀಕನಿಗೆ ನಾಚಿಕೆಯಾಗಿ ನನ್ನ ಬಳಿ ಬಂದು ಹುಸಿಕೋಪದಿಂದ

ಕುಡು, ಚಪಳೆ, ಜಪದಮಣಿಯಂ
ಕುಡದೆ-ಇನ್ನೊಂದಡಿಯನಪ್ಪೊಡಂ ಪೋಗದಿರ್-ಎಂ
ದೊಡೆ ಕೇಳ್ದು ಜಪದಮಣಿಗೆತ್ತು-
ಒಡನೆಯೆ ಹಾರಮನೆ ತೆಗೆವೆನ್-ಎನ್ನಯ ಕೊರಲಿಂ

ಆತನ ದೃಷ್ಟಿ ನನ್ನ ಮುಖದಲ್ಲಿ ಆಸಕ್ತವಾಗಿತ್ತು. ಮೈಯ್ಯರಿಯದೆ ತನ್ನ ಜಪಸರವೇ ಅದು ಎಂಬ ಭ್ರಾಂತಿಯಿಂದ ಆತನು ಮುತ್ತಿನ ಹಾರವನ್ನು ತೆಗೆದುಕೊಂಡು ಹೋದನು. ಮನೆಗೆ ಬಂದೆ. ಆದರೆ ಆ ಹೊತ್ತಿಗೆ ಪೂರ್ತಿ ಪರಾಧೀನಳಾಗಿ ಹೋಗಿದ್ದೆ. ಮೈ, ಮನಸ್ಸು, ಆಸೆ ಎಲ್ಲವೂ ಆತನವಾಗಿದ್ದವು. ಅಚ್ಛೋದದ ಕಡೆಯೇ ನೋಟ, ಅಲ್ಲಿಯೇ ಜೀವ, ಆತನದೇ ಧ್ಯಾನ. ಹೀಗಿರಲು ನನ್ನ ಬಳಿಗೆ ಮಕರಿಕೆ ಬಂದು ಪುಂಡರೀಕನು ಬರೆದು ಕಳಿಸಿದ್ದ ಸಂದೇಶವೊಂದನ್ನು ಕೈಗೆ ಕೊಟ್ಟಳು. ಆತನ ಮನಸ್ಸು ಹೇಗೆ ನನ್ನಲ್ಲಿ ಸೇರಿಹೋಗಿದೆಯೆಂಬುದನ್ನು ಆ ಮೂಲಕ ತಿಳಿದ ನನಗೆ ಪರಮಾನಂದವಾಯಿತು. ಸಂಜೆಯ ಹೊತ್ತಿಗೆ ಕಪಿಂಜಲನು ನನ್ನಲ್ಲಿಗೆ ಬಂದು ತನ್ನ ಗೆಳೆಯನ ಸ್ಥಿತಿ, ಗತಿ ರೀತಿಗಳನ್ನೂ ಕಂಗಾಲುತನವನ್ನೂ ದೀನವಾಗಿ ವರ್ಣಿಸಿದನು. ನನ್ನ ದಯೆಯಿಂದ ಮಾತ್ರ ಅವನು ಬದುಕಬಹುದು-ಈ ಸನ್ನಿವೇಶಕ್ಕೆ ತಕ್ಕಂತಹುದನ್ನು ಮಾಡಬೇಕು ಎಂದು ಬೇಡಿ ಹೋದನು. ಮಗಳು ಅಸ್ವಸ್ಥಳಾಗಿರುವುದನ್ನು ಕೇಳಿ ಈ ನಡುವೆ ನನ್ನ ತಾಯಿ ಬಂದು ಬಹಳ ಹೊತ್ತು ಇದ್ದು ಹೋದಳೆಂಬುದರ ಅರಿವೇ ನನಗಿಲ್ಲವಾಗಿತ್ತು. ಮದನಾತುರೆಯಾದ ನನಗೆ ಇನ್ನು ತಾಯಿ, ತಂದೆ, ಬಂಧು, ಬಳಗ, ಕುಲ, ಕೀರ್ತಿ, ಲೋಕವಿಚಾರ ಯಾವುದೂ ಬೇಕಾಗಲಿಲ್ಲ. ಸಂಜೆಯಹೊತ್ತಿಗೆ ಕೆಳದಿ ತರಳಿಕೆಯೊಡನೆ ಪುಂಡರೀಕನಿರುವೆಡೆಗೆ ಹೊರಟೆ. ಚಂ

ದ್ರೋದಯವಾಗಿ ಅಂತಃಕರಣ ಸೊಕ್ಕಿತು. ಎಡಗಣ್ಣು ಅದು ರಿತು. ಅಪಶಕುನಕ್ಕೆ ಹೆದರಿ ಮುಂದೆ ನಡೆಯುತ್ತಿರಲು ಗಂಡು ಕೊರಲ ಅಳು ಕೇಳಿಸಿತು. ಏನು ಗತಿ ಬಂತೋ ಎಂದು ಹೋಗಿ ನೋಡುವಲ್ಲಿ ಪುಂಡರೀಕನು ಮೃತನಾಗಿ ಬಿದ್ದಿರುವುದೂ ಕಪಿಂಜಲ ಗೋಳಿಡುತ್ತಿರುವುದೂ ಕಾಣಿಸಿತು. ಕತ್ತಲು ಕವಿದಂತಾಗಿ ನಾನೂ ಮೂರ್ಛೆ ಬಿದ್ದೆ. ಎಚ್ಚತ್ತಮೇಲೆ ದಿಕ್ಕುದಿಕ್ಕಿಗೆ ಮೊರೆಯಿಟ್ಟೆ. ಪುರುಷ ಭಿಕ್ಷೆಯನ್ನು ನೀಡಿರೆಂದು ವಿಶ್ವವನ್ನೇ ಬೇಡಿಕೊಂಡೆ. ಯಾವ ತೆರದಿಂದ ಯಾರೂ ಕಾವರಿಲ್ಲದ್ದನ್ನು ಕಂಡು ಪ್ರಿಯನ ಗತಿಯೇ ನನ್ನದು ಎಂದು ಭಾವಿಸಿ ಸಹಗಮನಮಾಡಬೇಕೆಂದಿರುವ ಹೊತ್ತಿಗೆ ಚಂದ್ರಮಂಡಲದಿಂದ ದಿವ್ಯಪುರುಷನೊಬ್ಬನು ಬಂದು ತಡೆದನು.

ಬಗೆಗಟ್ಟಿ ಸಾವಬಗೆಯಂ

ಮಗಳೆ, ಮಹಾಶ್ವೇತೆ, ಬಗೆಯ.ದಿರ್ ; ಕೂಡುವೆ ನೀಂ

ಮಗುಳೆಯುಂ—ಈತನನ್—ಎಂದು ನಂಬಿಕೆ ಹೇಳಿ ಆತನ ದೇಹವನ್ನೆತ್ತಿಕೊಂಡು ಚಂದ್ರಲೋಕಕ್ಕೆ ಹೋದನು. ಇಷ್ಟೂ ಒಂದು ಕ್ಷಣದಲ್ಲಿ ನಡೆದುಹೋಯಿತು. ಕಪಿಂಜಲನನ್ನು ಕುರಿತು ನಾನು ಇದೇನೆಂದು ಕೇಳಲು ಆತನು ಉತ್ತರಕೊಡದೆ ಮುಖವೆತ್ತಿ ನನ್ನ ಸಖನನ್ನು ಒಯ್ಯುವೆ ಎತ್ತ? ಬಿಡು—ಎಂದು ಕೋಪದಿಂದ ಆ ಪುರುಷನ ಹಿಂದೆಯೇ ಅಂತರಿಕ್ಷಕ್ಕೆ ನೆಗೆದನು. ಕಪಿಂಜಲ ಹೋದುದರಿಂದ ನನ್ನ ಶೋಕ ನೂರ್ಮಡಿಯಾಯಿತು. ವನದಲ್ಲಿ ತರಳಿಕೆ, ನಾನು ಇಬ್ಬರೇ ಉಳಿದೆವು. ನಾನಾ ಬಗೆಯಲ್ಲಿ ಸಮಾಧಾನಹೇಳಿ ಕಪಿಂಜಲನು ಹಿಂದಿರುಗುವವರೆಗಾದರೂ ಬದುಕಿರಬೇಕೆಂದು ಆಕೆ ಬೇಡಿಕೊಂಡಳು. ಆಸೆಯಿಲ್ಲದ

ಆಸೆಯಿಂದ ಒಪ್ಪಿ ಬೆಳಗಿನ ಜಾವ ಆಕೆಯು ನೆರನಿಂದ ಕೊಳ ದಲ್ಲಿಳಿದು ಮಿಂದೆ. ಆದರೆ ಮನೆಗೆ ಹಿಂದಿರುಗುವ ಇಷ್ಟವಿಲ್ಲ ವಾಯಿತು. ಪ್ರಿಯನ ನಾರುಡೆ, ಜಪಸರ, ಕಮಂಡಲುಗಳನ್ನೇ ತೆಗೆದುಕೊಂಡು ಆತನ ವೇಷವನ್ನೇ ತಾಳಿ ವ್ರತತಳೆದೆ. ಈ ಕೊಳದ ತಡಿಯಲ್ಲಿ ಆಶ್ರಮಮಾಡಿಕೊಂಡು ಶಿವನಲ್ಲಿ ಶರಣು ಬೇಡಿದ್ದೇನೆ. ತಂದೆ ತಾಯಿಗಳು ಬಂದು ಬಹುವಾಗಿ ಬೇಡಿಕೊಂಡರು. ನನ್ನ ಮನಸ್ಸು ತಿರುಗಲಿಲ್ಲ. ಜಪದಿಂದ ತಪದಿಂದ ಒಡಲನ್ನು ದಂಡಿಸುವೆನೆಂದರೆ ಅದು ಕೃತಜ್ಞತೆ ಅಲ್ಲವೆ? ಛೀ! ಜಪದ ನೆವದಿಂದ ಪ್ರಿಯನ ಗುಣಗಳನ್ನೇ ನಾನು ಎಣಿಸುತ್ತಿರುವುದು.–ಇಂತಹ ನಿರ್ಭಾಗ್ಯೆಯ ಕಥೆಯನ್ನು ಕೇಳಿ ಫಲವೇನು? ಎಂದು ನುಡಿಯುವಳು.

ಆಕೆಗೆ ಆದುಃಖಪ್ರಸಂಗ ಆಂದು ಪುನಃ ನಡೆಯಿತೆಂಬಷ್ಟು ತೀವ್ರ ಶೋಕವುಂಟಾಗಿತ್ತು. ಚಂದ್ರಾಪೀಡನು ಆಕೆಗೆ ಸಮಾಧಾನ ಹೇಳುವನು. ಹತ್ತಿರದ ಅಬ್ಬಿಯ ನೀರು ತಂದು ಕೊಡಲು ಆಕೆ ಮುಖ ತೊಳೆದುಕೊಳ್ಳುವಳು. ಆತನ ಕುತೂಹಲ ಮತ್ತಷ್ಟು ಹೆಚ್ಚಿ ನಿಮ್ಮ ಜೊತೆಯಲ್ಲಿದ್ದ ತರಳಿಕೆ ಎಲ್ಲಿ ಎಂದು ಪ್ರಶ್ನೆಮಾಡುವನು. ಮಹಾಶ್ವೇತೆ ಅದಕ್ಕೆ ಉತ್ತರಕೊಡುತ್ತ ಕಾದಂಬರಿಯ ವೃತ್ತಾಂತವನ್ನು ತಿಳಿಸುವಳು :

೩. ಚಿತ್ರರಥನೆಂಬ ಗಂಧರ್ವರಾಜನಿಗೂ ಆತನ ಅರಸಿತಿ ಅಪ್ಸರೆ ಮದಿರಾದೇವಿಗೂ ನನ್ನ ಗೆಳತಿ ಕಾದಂಬರಿ ಮಗಳು. ಆಕೆ ಗುಣವತಿ, ಸ್ನೇಹಶೀಲೆ. ನನಗೆ ಬಂದ ಕಷ್ಟವನ್ನು ಕೇಳಿ ತಾನೂ ಕನ್ಯಾವ್ರತದಲ್ಲಿ ಕಾಲ ಕಳೆಯುವೆನೆಂದು ತೀರ್ಮಾನ ಮಾಡಿದ್ದಾಳೆ. ತಾಯಿ ತಂದೆ ಎಷ್ಟು ಬೇಡಿಕೊಂಡರೂ ಕೇಳಲಿಲ್ಲ. ಅವರು ನನಗೆ ಹೇಳಿ ಕಳಿಸಿದರು. ನಾನು ಕಾದಂ

ಬರಿಯ ಮನಸ್ಸನ್ನು ತಿರುಗಿಸಲು ಯತ್ನಿಸಿ ಹಿರಿಯರ ಮಾತು ಕೇಳಬೇಕೆಂದೂ ನಾನು ಬದುಕಿರಬೇಕಾದರೆ ತಾನು ಹಟಮಾಡಕೂಡದು ಎಂದೂ ತಿಳಿಸಿಬ್ಬಾರೆಂದು ತರಳಿಕೆಯನ್ನು ಕಾದಂಬರಿಯ ಬಳಿಗೆ ಅತ್ತ ಕಳಿಸಿದೆ, ಇತ್ತ ನೀವು ಬಂದಿರಿ, ಎಂದಳು.

ಇರುಳು ಕಳೆದು ಬೆಳಗಾಯಿತು. ಕೇಯೂರಕನೆಂಬ ಕಾದಂಬರಿಯ ವೀಣಾಧರನೊಡನೆ ತರಳಿಕೆ ಬಂದಳು. ಕಾದಂಬರಿ ಹೇಗೂ ತನ್ನ ನಿರ್ಧಾರವನ್ನು ಬಿಡಳೆಂಬ ಸಂಗತಿ ಮನವರಿಕೆಯಾಯಿತು.

೪. ಮಹಾಶ್ವೇತೆಗೆ ಒಂದು ಯೋಚನೆ ಹೊಳೆಯಿತು. ನಾನೇ ಬಂದು ಅಲ್ಲಿಗೆ ತಕ್ಕುದೆಲ್ಲವನ್ನೂ ನಯದಿಂದ ಹೇಳುತ್ತೇನೆ, ನೀನು ಮುಂದೆ ಹೋಗೆಂದು ಕೇಯೂರಕನಿಗೆ ಹೇಳಿ ಕಳಿಸಿ ಚಂದ್ರಾಪೀಡನನ್ನು ಕರೆದುಕೊಂಡು ರಾಜಧಾನಿಯಾದ ಹೇಮಕೂಟಕ್ಕೆ ಹೋಗುವಳು. ಮೊದಲ ನೋಟದಲ್ಲಿಯೇ ಕಾದಂಬರಿ ಚಂದ್ರಾಪೀಡರಿಗೆ ಅನುರಾಗ ಹುಟ್ಟಿ ಒಬ್ಬರಿಗೊಬ್ಬರು ಮನಸೋಲುವರು. ಇದನ್ನು ಕಂಡು ಮಹಾಶ್ವೇತೆಗೆ ಸಂತೋಷವಾಯಿತು. ಸ್ವಾಗತದ ಉಪಚಾರಗಳು ನಡೆದಮೇಲೆ ಚಂದ್ರಾಪೀಡನನ್ನು ಬೀಡಾರಕ್ಕೆ ಕಳಿಸಿ ಶೇಷವೆಂಬ ಮುತ್ತಿನ ಹಾರವನ್ನು ಮೆಚ್ಚು ಕಳಿಸುವರು. ಬಳಿಕ ಕಾದಂಬರಿಯೇ ಆತನಿರುವಲ್ಲಿಗೆ ಬಂದು ಮಾನ್ಯ ಅತಿಥಿಗೆ ತೋರಬೇಕಾದ ಲೋಕಮರ್ಯಾದೆಯಂತೆ ಯೋಗಕ್ಷೇಮ ವಿಚಾರಿಸಿಕೊಂಡು ಹೋಗುವಳು. ರೂಪಕ್ಕೆ ಸೋತಿದ್ದ ಹೃದಯಗಳಿಗೆ ಗುಣ, ನಯ ಕಂಡು ಪ್ರೇಮ ಬಲಿಯುವುದು. ಆದರೇನು ? ಒಂದು ದಿನ ಮಟ್ಟಿಗೆ ಮಾತ್ರ ಚಂದ್ರಾಪೀಡನು ಅಲ್ಲಿರಲು ಬಂದಿದ್ದುದು. ಮರುದಿನ ಬೆಳಗ್ಗೆ ಅವರಿದ್ದಲ್ಲಿಗೆ ಹೋಗಿ ತಾನು ಮರಳಬೇಕೆಂದು

ಅವರ ಅಪ್ಪಣೆ ಪಡೆದು ಪಾಳೆಯಕ್ಕೆ ಹಿಂದಿರುಗಿ ಬರುವನು. ಹಗಲಿರುಳೂ ಈತನಿಗೆ ಕಾದಂಬರಿಯ ಯೋಚನೆಯೆ. ಕಾದಂಬರಿಗೂ ಹಾಗೆಯೇ ಅವನಿಲ್ಲದ ಪ್ರಪಂಚ ಬೇಡವಾಗಿತ್ತು. ಚಂದ್ರಾಪೀಡನು ಪರಿವಾರವನ್ನು ಸೇರಿದುದೇ ತಡ, ಕಾದಂಬರಿ ಅಸ್ವಸ್ಥಳಾಗಿದ್ದಾಳೆಂದೂ ತಾವೆಲ್ಲ ಇನ್ನೊಂದು ಬಾರಿ ಕುಮಾರನನ್ನು ನೋಡಬಯಸುತ್ತಿರುವರೆಂದೂ ಒಂದು ಸಲ ದಯಮಾಡಿ ಬಂದು ಹೋಗಬೇಕೆಂದೂ ಮಹಾಶ್ವೇತೆ ಕರೆ ಕಳಿಸುವಳು. ಪತ್ರಲೇಖೆಯನ್ನು ಕರೆದುಕೊಂಡು ಹೇಮಕೂಟಕ್ಕೆ ಎರಡನೆಯ ಸಲ ಹೋಗಿ ಕಾದಂಬರಿಯ ಪ್ರೇಮ ಮತ್ತಷ್ಟು ಸ್ಪಷ್ಟವಾಗಿ ಕಾಣುತ್ತಿದ್ದರೂ ಮರ್ಯಾದೆಯಿಂದ ಇದ್ದು, ಕಾದಂಬರಿಯ ಇಷ್ಟದಂತೆ ಪತ್ರಲೇಖೆಯನ್ನು ಆಕೆಯ ಬಳಿಯೇ ಬಿಟ್ಟು ಆತನು ಪಾಳೆಯಕ್ಕೆ ಹಿಂದಿರುಗುವನು. ಇಷ್ಟುಹೊತ್ತಿಗೆ ತಂದೆಯಿಂದ ಪತ್ರ ಬಂದಿತ್ತು. ದಿಗ್ವಿಜಯಕ್ಕಾಗಿ ಹೊರಟು ಬಹು ಕಾಲವಾಗಿದೆ, ತಾಯಿಯರು ತವಕಪಡುತ್ತಿದ್ದಾರೆ, ಕೂಡಲೆ ಊರಿಗೆ ಮರಳತಕ್ಕದ್ದು ಎಂಬ ಆತನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಮನಸ್ಸಿಲ್ಲದ ಮನಸ್ಸಿಂದ ಉಜ್ಜಯಿನಿಗೆ ಪ್ರಯಾಣಮಾಡುವನು.

ವೈಶಂಪಾಯನನೂ ಸೈನ್ಯದ ಸ್ವಲ್ಪ ಭಾಗದವರೂ ಹಿಂದುಳಿಯುವರು. ಪತ್ರಲೇಖೆಯನ್ನು ಉಜ್ಜಯಿನಿಗೆ ಕರೆತರುವ ಕೆಲಸ ಅವರ ಪಾಲಿಗೆ ಬೀಳುವುದು.

ಊರಿಗೆ ಬಂದು ಹಿರಿಯರನ್ನು ಕಂಡು ಸಂತೋಷಪಡಿಸಿದ್ದೇನೊ ಆಯಿತು. ಆದರೆ ಮನಸ್ಸೆಲ್ಲ ಹೇಮಕೂಟದಲ್ಲಿತ್ತು. ಕೇಯೂರಕನೂ ಪತ್ರಲೇಖೆಯೂ ಅಲ್ಲಿಗೆ ಬಂದು ಕಾದಂಬರಿಯ ಸ್ಥಿತಿಯನ್ನು ವಿಶದಪಡಿಸಿದರು. ಆತನಿಗೆ ಆಕೆಯ ಪ್ರೇಮದ

ಆಳ ತಿಳಿಯಿತು. ತಾಯಿತಂದೆಗಳಿಗೆ ತಿಳಿಸದೆ ಹೋಗುವುದು ಸರಿಯಲ್ಲ; ತಿಳಿಸಲು ನಾಚಿಕೆ. ಆದ್ದರಿಂದ ವೈಶಂಪಾಯನನು ಬಂದ ಕೂಡಲೆ ಅವನ ಮೂಲಕ ಎಲ್ಲವನ್ನೂ ಹಿರಿಯರಿಗೆ ಹೇಳಿಸಿ ಎರಡು ಕಡೆಯವರೂ ಒಂದಾಗಿ ಮದುವೆ ನೆರವೇರಿ ಸುವಂತೆ ಮಾಡಬೇಕೆಂದು ಯೋಚಿಸಿ ವೈಶಂಪಾಯನ ಬರು ವುದನ್ನೇ ಹಾರೈಸುತ್ತಿದ್ದನು. ಕೆಲವು ದಿನಗಳಲ್ಲಿ ತನ್ನ ಸೈನ್ಯ ದಶಪುರಕ್ಕೆ ಬಂದಿತೆಂಬ ಸುದ್ದಿ ಮುಟ್ಟಿತು. ಗೆಳೆಯನನ್ನು ಇದಿರು ಗೊಳ್ಳಲು ತಾನೇ ದಶಪುರದ ಕಡೆ ಹೋಗುವನು. ಹೇಗಾದರೂ ಮಾಡಿ ತಾನು ಬೇಗ ದೇವಿಯರಲ್ಲಿಗೆ ಬರುವೆನೆಂದೂ ಅವರಗೂ

ಯತ್ನದಿಂ ನಿಜಶರೀರಮುಂ ನಿಲಿಸವೇಳ್ಪುದು ದೇವಿಯರ್

ಎಂದು ಹೇಳುವಂತೆ ಪತ್ರಲೇಖೆಗೆ ಬೆಸಸಿ ಆಕೆಯಲ್ಲಿಗೆ ಕಳಿಸಿ ಕೊಡುವನು.

೫. ಸೈನ್ಯ ಬಂದಿತು; ಗೆಳೆಯನು ಬರಲಿಲ್ಲ. ಅಚ್ಛೋದ ಸರೋವರದ ತೀರದಲ್ಲಿ ಆತನಿಗೆ ಏನೋ ಮಂಕುಬಡಿಯಿತಂತೆ; ಯಾರು ಏನು ಹೇಳಿದರೂ ಕೇಳದೆ ವಿರಕ್ತನಾಗಿ ಅಲ್ಲಿಯೇ ಉಳಿದು ಬಿಟ್ಟಿದ್ದನಂತೆ. ಇದನ್ನು ಕೇಳಿ ಚಂದ್ರಾಪೀಡನಿಗೆ ಕಳವಳವುಂಟಾಯಿತು. ಆದ್ದರಿಂದ ಹಿರಿಯರ ಬಳಿಗೆ ಹೋಗಿ ತಾನೇ ಅವನನ್ನು ಕರೆತರುತ್ತೇನೆಂದು ತಿಳಿಸಿ, ಮಗನ ನಡತೆಗೆ ಕೋಪಗೊಂಡ ಶುಕನಾಸನನ್ನು ಸಂತೈಸಿ ಅಚ್ಛೋದದ ಕಡೆಗೆ ಚಂದ್ರಾಪೀಡನು ಪ್ರಯಾಣಬೆಳಸುವನು. ಗೆಳೆಯನನ್ನು ಬೇಗ ಕಾಣುತ್ತೇನೆ; ಮಹಾಶ್ವೇತೆಯನ್ನು ವಂದಿಸುವ ಭಾಗ್ಯ ದೊರೆ ಯುತ್ತದೆ; ಕಾದಂಬರಿಯನ್ನು ಸೇರುತ್ತೇನೆ; ತರಳಿಕೆಯೊಡನೆ ವೈಶಂಪಾಯನನಿಗೆ ಮದುವೆಮಾಡಿಸುತ್ತೇನೆ ಎಂದು ದಾರಿ

ಯಲ್ಲಿ ಆತನ ಆಸೆಗಳು ಮುಗಿಲಗೋಪುರ ಕಟ್ಟುತ್ತಿದ್ದುವು. ಆದರೆ ಅಚ್ಛೋದದ ಬಳಿ ಎಲ್ಲಿ ಹುಡುಕಿದರೂ ವೈಶಂಪಾಯನನ ಸುಳಿವೇ ಇಲ್ಲ. ಮಹಾಶ್ವೇತೆಯನ್ನು ಕೇಳಿದರೆ ಆತನ ವೃತ್ತಾಂತ ತಿಳಿದೀತೆಂದು ಆಕೆಯಲ್ಲಿಗೆ ಹೋದರೆ ಆಕೆ ಅತಿಯಾಗಿ ದುಃಖಿಸುತ್ತ ತಲೆಬಾಗಿರುವಳು. ಕಾದಂಬರಿಗೇನು ಕೇಡು ಸಂಭವಿಸಿತೊ ಎಂದು ಸಂದೇಹವುಂಟಾಗಿ ತರಳಿಕೆಯನ್ನು ಕುರಿತು ಮೆಲ್ಲಗೆ ಇದೇನೆಂದು ಕೇಳಲು ನಡೆದ ಸಂಗತಿಯನ್ನೆಲ್ಲ ಮಹಾಶ್ವೇತೆಯೇ ವಿವರಿಸುವಳು:

ಚಂದ್ರಾಪೀಡನ ವಯಸ್ಸಿನ ಚೆಲುವನಾದ ಒಬ್ಬನು ಆಕೆಯನ್ನು ಆಶ್ರಮದ ಬಳಿ ಕಂಡು ಮೋಹಗೊಂಡನೆಂತಲೂ ಎಷ್ಟು ಬಗೆಯಲ್ಲಿ ಅಡ್ಡಿಮಾಡಿದರೂ ನಿರ್ಲಕ್ಷ್ಯ, ತಿರಸ್ಕಾರ ತೋರಿಸಿದರೂ ಆಕೆಯ ಕಣ್ಬೊಲದಿಂದ ತೊಲಗದೆ ಸಂತತ ಸುಳಿದಾಡುತ್ತಿದ್ದನೆಂತಲೂ ಒಂದು ರಾತ್ರಿ ಬೆಳುದಿಂಗಳಲ್ಲಿ ತನ್ನ ಕಥೆಯನ್ನೂ ಪುಂಡರೀಕನನ್ನೂ ನೆನಸಿಕೊಳ್ಳುತ್ತ ಆಕೆ ಏಕಾಂಗಿಯಾಗಿ ವಿಶ್ರಮಿಸುತ್ತಿರಲು ಆಕೆಯ ಬಳಿಗೆ ಉನ್ಮತ್ತನಂತೆ ಕೈಚಾಚಿ ಹೋಗಿ, ಕಾಮವಿಕಾರದ ಮಾತುಗಳನ್ನಾಡಿ ತನ್ನ ಜೀವಿತ ಆಕೆಯ ಅಧೀನವೆಂದೂ ಮರೆಹೊಕ್ಕಿದ್ದಾನೆಂದೂ ಪ್ರತೀಕಾರ ಕಾಣದ ತನ್ನನ್ನು ಆ ಸ್ಥಿತಿಯಿಂದ ರಕ್ಷಿಸಬೇಕೆಂದೂ ಬೇಡಿದನೆಂತಲೂ ಆಕೆಗೆ ಕೋಪಬಂದು, ಯುಕ್ತಾಯುಕ್ತ ವಿವೇಚನೆ ಇಲ್ಲದೆ ಸತಿಯೆದುರು ನಿಂತು ಗಿಳಿಯಂತೆ ಗಳಹುತ್ತಿರುವ ಅವನು ಗಿಳಿಯಾಗಲೆಂದು ಆಕೆ ಶಾಪಕೊಟ್ಟಳೆಂತಲೂ, ಕೂಡಲೆ ಅವನು ತೀರಿಕೊಂಡನೆಂತಲೂ ಪರಿಜನರ ಮೂಲಕ ಅವನು ಚಂದ್ರಾಪೀಡನಗೆಳೆಯ ವೈಶಂಪಾಯನನೆಂದು ಆಮೇಲೆ ತಿಳಿಯಿತೆಂತಲೂ ಹೇಳಿ ತಲೆಬಾಗಿದಳು. ಬ್ರಾಹ್ಮಣಹನನ

ಮಹಾಪಾಪಿಯಾದ ತನ್ನನ್ನು ವಿಧವಿಧವಾಗಿ ಹಳಿದುಕೊಂಡಳು.

ಗೆಳೆಯನು ಮೃತಪಟ್ಟ ಸಂಗತಿಯನ್ನು ಕೇಳಿದೊಡನೆಯೆ ಚಂದ್ರಾಪೀಡನ ಎದೆ ಒಡೆಯಿತು. ಈ ಹುಟ್ಟಿನಲ್ಲಿ ಕಾದಂಬರಿಯ ಸಮಾಗಮವಾಗದುದಕ್ಕೆ ತಪಿಸುತ್ತ ಮಹಾಶ್ವೇತೆಯೆದುರಿಗೆ ಚಂದ್ರಾಪೀಡನು ನಿಶ್ಚೇಷ್ಟಿತನಾಗಿ ಬಿದ್ದನು. ಎಲ್ಲರೂ ತಬ್ಬಲಿಗಳಾದಂತಿದ್ದರು.

ಚಂದ್ರಾಪೀಡನು ಮಹಾಶ್ವೇತೆಯ ಆಶ್ರಮಕ್ಕೆ ಬಂದಿರುವನೆಂಬ ಸುದ್ದಿಯನ್ನು ಕೇಳಿದ ಕಾದಂಬರಿ ಆತನನ್ನು ಕಾಣಲು ಬಹಳ ಸಂಭ್ರಮದಿಂದ ಸಖಿಯರೊಡನೆಯೂ ಪತ್ರಲೇಖೆಯೊಡನೆಯೂ ಅಲ್ಲಿಗೆ ಬಂದಳು. ಸ್ಥಿತಿ ಗೊತ್ತಾಗಲು ಕಾದಂಬರಿ ದಿಕ್ಕೆಟ್ಟು ತಾನೂ ಜೀವಹತ್ಯ ಮಾಡಿಕೊಳ್ಳುವೆನೆನ್ನುತ್ತ ರಾಜಕುಮಾರನ ದೇಹವನ್ನು ಕಟ್ಟಿಕೊಂಡು ಹಲುಬುತ್ತಿರಲು ಚಂದ್ರಮಂಡಲದಿಂದ ದಿವ್ಯ ವಾಣಿಯೊಂದು ಕೇಳಿಸಿತು: 'ಬೇಗನೆ ಮಹಾಶ್ವೇತೆಯ ಕೆಲಸ ಕೈಸೇರುವುದು; ಪುಂಡರೀಕನ ದೇಹಕ್ಕೆ ಪುನಃ ಜೀವ ಬರುವುದು; ಚಂದ್ರಾಪೀಡನ ಜೀವ ಸದ್ಯಕ್ಕೆ ಪರಕಾಯಪ್ರವೇಶ ಮಾಡಿದೆಯಷ್ಟೇ; ಅದು ನಿತ್ಯವಾದದ್ದು; ಆತನೂ ಕೆಲವು ದಿನಗಳಲ್ಲಿ ಕಾದಂಬರಿಯಲ್ಲಿ ಕೂಡುವನು; ಎಲ್ಲ ಪ್ರಯತ್ನದಿಂದಲೂ ದೇಹವನ್ನು ಆರಾಧಿಸಿ ಕಾಪಾಡಿರಿ, ಎಂದು ಹೇಳಿ ವಾಣಿ ನಿಂತಿತು.

ಚಂದ್ರಾಪೀಡನ ಗತಿಯನ್ನು ಕಂಡು ಎಲ್ಲರಂತೆ ಶೋಕಗೊಂಡು ತಿಳಿವುತಪ್ಪಿದ್ದ ಪತ್ರಲೇಖೆ ತಂಪುಕಿರಣದ ಸ್ಪರ್ಶದಿಂದ ಎಚ್ಚತ್ತು ಕೂಡಲೆ ಇಂದ್ರಾಯುಧದ ಬಳಿಗೆ ಹೋಗಿ ಅದನ್ನು ಹಿಡಿದಿದ್ದ ಚಾಕರನಿಂದ ತೆಗೆದುಕೊಂಡು, 'ವಾಹನವಿಲ್ಲದೆ ಚಂದ್ರಾಪೀಡದೇವನು ಏಕಾಕಿಯಾಗಿ ದೂರ ಹೋಗಲು

ನಮ್ಮಂತಹವರು ಹೀಗೆ ಇರುವುದು ಅನುಚಿತ' ಎಂದು ನುಡಿದು ಅದರೊಡನೆ ಅಚ್ಛೋದದಲ್ಲಿ ಹಾರಿಕೊಂಡಳು. ಕೂಡಲೆ, ಆಶ್ಚರ್ಯದ ಮೇಲೆ ಆಶ್ಚರ್ಯ! ಸರೋವರದಿಂದ ಕಪಿಂಜಲನೆದ್ದು ಬಂದು ಎದುರಿಗೆ ನಿಂತನು. ಆತನನ್ನು ಗುರುತಿಸಿ, ಪುಂಡರೀಕನನ್ನು ಒಯ್ದವರಾರು? ಎಲ್ಲಿ ಇರಿಸಿಟ್ಟಿದ್ದಾರೆ? ಆ ವಾರ್ತೆಯೇನು? ಇಷ್ಟರವರೆಗೆ ವಿಳಂಬಿಸಿಯೂ ಒಬ್ಬರೇ ಬಂದಿರೇ, ಏನು ಕಾರಣ? ಎಂದು ಕೇಳಿದುದಕ್ಕೆ ಉತ್ತರವಾಗಿ– ಆ ವ್ಯಕ್ತಿ ಚಂದ್ರ, ಲೋಕಾನುಗ್ರಹಕ್ಕಾಗಿ ಆತನು ಉದಯಿಸಿರಲು ಕಾಮಾತುರನಾಗಿ ಸಾಯುತ್ತಿದ್ದ ಪುಂಡರೀಕನು ಚಂದ್ರನನ್ನು ಕೋಪದಿಂದ ನೋಡಿ,

ಎಲೆ ಚಂದ್ರಹತಕ, ಮದನನ
ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ
ನಿಲಲರಿಯೆ; ಇರ್ದು ನೀಂ ಮ
ರ್ತ್ಯ ಲೋಕದೊಳ್ ಪುಟ್ಟು-ಎನುತ್ತೆ ಶಾಪಂಗೊಟ್ಟಂ.

ನಿರಪರಾಧನಾದ ತನಗೆ ಅವಿಚಾರದಿಂದ ಈರೀತಿ ಶಾಪಕೊಡಲು 'ನೀನೂ ದುಃಖವನ್ನು ನನ್ನೊಡನೆ ಅನುಭವಿಸು' ಎಂದು ಆತನಿಗೆ ಚಂದ್ರನು ಮರುಶಾಪ ಕೊಟ್ಟನಂತೆ. ತನ್ನ ಕುಲದವಳಾದ ಮಹಾಶ್ವೇತೆ ಆತನನ್ನು ಪ್ರೀತಿಸಿರುವುದರಿಂದ ಆಕೆಗೋಸ್ಕರವಾಗಿ ಪುಂಡರೀಕನ ಮೇಲಿನ ಕೋಪವುಳಿದು ಆತನ ಶರೀರವನ್ನು ಕೆಡದಂತೆ ತಂದು ತೇಜಸ್ಸಿನಿಂದ ಪೋಷಿಸುತ್ತ ಶಾಪ ಬಿಡುವ ಕಾಲದವರೆಗೂ ಇರಿಸಿದ್ದೇನೆ, ನೀನು ಆತನ ತಂದೆಯ ಬಳಿಗೆ ಹೋಗಿ ಹೇಳು, ಆತನು ಮಗನಿಗೆ ಆಯುಷ್ಕಾಮ ಹೋಮಾದಿಗಳನ್ನು ಮಾಡುವನು—ಎಂದು ನನ್ನನ್ನು ಹಿಂದಕ್ಕೆ

ಕಳಿಸಿದನು. ಗೆಳೆಯನ ಶೋಕದಿಂದ ಕಣ್ಣುಕಾಣದೆ ಆಕಾಶ ಮಾರ್ಗದಲ್ಲಿ ಬೇಗ ಬೇಗ ಬರುತ್ತಿದ್ದೆ. ದಾರಿಯಲ್ಲಿ ವೈಮಾನಿಕ ನೊಬ್ಬನು ಬರಲು ಆತನನ್ನು ಭರದಿಂದ ದಾಟಿದೆ. ಈ ಅವಿ ನಯವನ್ನು ಕಂಡು ಆತನಿಗೆ ಕೋಪಬಂತು: ಅಗಲವಾದ ಆಕಾಶಮಾರ್ಗದಲ್ಲಿ ತನ್ನನ್ನು ಲಕ್ಷ್ಯಮಾಡದೆ ವಿದ್ಯಾಗರ್ವ ದಿಂದ ಕುದುರೆಯಂತೆ ದಾಟಿದೆಯಾದ್ದರಿಂದ ಭೂಮಿಯಲ್ಲಿ ಕುದುರೆಯಾಗಿ ಹುಟ್ಟಿಹೋಗು ಎಂದು ಆತನು ನನಗೆ ಶಾಪ ಕೊಟ್ಟನು. ಬುದ್ಧಿಪೂರ್ವಕವಾಗಿ ಅಪಚಾರ ಮಾಡಲಿಲ್ಲ ವೆಂದು ಆತನಿಗೆ ನಿಜಸ್ಥಿತಿಯನ್ನು ವಿವರಿಸಿ ಕರುಣೆ ಬೇಡಿದುದ ಲ್ಲದೆ ಶಾಪಾಂತಕಾರಣವನ್ನು ತಿಳಿಸಬೇಕೆಂದು ಕೇಳಿಕೊಂಡೆ. ಆತನು ಅದಕ್ಕೆ ಯಾವನಿಗೆ ವಾಹನನಾಗಿರುವೆಯೋ ಆತನು ಬೇರೆ ಒಡಲಿಗೆ ಸಲ್ಲುವ ಸಮಯದಲ್ಲಿ ನೀನು ಅಚ್ಛೋದದಲ್ಲಿ ಮುಳುಗಿದರೆ ಶಾಪ ಬಿಡುವುದು ಎಂದನು. ನಾನು ಆತ ನನ್ನು ಕುರಿತು ನನ್ನ ಗೆಳೆಯನೂ ಚಂದ್ರನೂ ಭೂಮಿಯಲ್ಲಿ ಹುಟ್ಟವರು, ಅವರು ಹುಟ್ಟಿದಲ್ಲಿ ಹುಟ್ಟುವಂತೆ ನೀವು ದಯೆ ಯಿಂದ ಮಾಡಿರೆಂದು ಬೇಡಿದೆ. ಚಂದ್ರನು ಚಂದ್ರಾಪೀಡ ನಾಗಿಯೂ ನಿನ್ನ ಸ್ನೇಹಿತ ಪುಂಡರೀಕನು ವೈಶಂಪಾಯನನಾ ಗಿಯೂ ಹುಟ್ಟುತ್ತಾರೆ, ಚಂದ್ರಾಪೀಡನಿಗೆ ನೀನು ವಾಹನ ವಾಗುವೆ ಎಂದು ಆತನು ಹೇಳಿದನು. ಕಿನ್ನರಗಳ ನೆವದಿಂದ ನಿನ್ನನ್ನು ಕಾಣಿಸಲೆಂದು ಚಂದ್ರಾಪೀಡನನ್ನು ತಂದವನು ನಾನೇ ಎಂದು ಕಪಿಂಜಲನು ತಿಳಿಸಲು ಮಹಾಶ್ವೇತೆಯ ದುಃಖ ತಾಳಲಾಗದಾಯಿತು. 'ಹಾ ಮನಃಪ್ರಿಯ ಪುಂಡರೀಕ, ಜನ್ಮಾಂತರಾವಿಸ್ಮೃತಮದನುರಾಗ, ಮತ್ಪ್ರತಿಬದ್ಧಜೀವಿತ, ಮನ್ಮಯ ಸಕಲ ಜೀವಿತಲೋಕ, ಎಂದು ಶೋಕ ಗದ್ಗದೆಯಾಗಿ

ಮುನ್ನಂ–ಆದೊರ್ಮೆ ಪಾತಕಿಯೆನ್ ಅಂತಿರೆ ಕೊಂದವಳೇ; ಭವಾಂತರೋ
ತ್ಪನ್ನನೆಯಾಗಿಯುಂ ಮದನುರಾಗದಿನೆಳ್ತರೆ ಮತ್ತೆ ಕೊಂದೆನಾಂ
ನಿನ್ನನೆ; ನಿನ್ನನಿಂತು ಮುಗುಳ್ದುಂ ಮುಗುಳ್ದುಂ ಕೊಲವೇಳ್ಪುದೆಂದು ಪೇಳ್-
ಎನ್ನನಿದಿಂತು ಪುಟ್ಟಿಸಿದನೇ ವಿಧಿ,ರಕ್ಕಸಿಯಂ ಮನಃಪ್ರಿಯಾ

ಹೀಗೆ ಗೋಳಿಡುವ ಆಕೆಯನ್ನು ಕಪಿಂಜಲನು ಸಂತೈಸಿ ಈ ರೀತಿಯ ಶೋಕದಿಂದ ಶ್ರೇಯಸ್ಸುಬಾರದು; ಅಭಿಲಾಷೆಯ ಸಿದ್ಧಿಗಾಗಿ ಯಾವ ಸದ್ವ್ರತವನ್ನು ನೀವಿಬ್ಬರೂ ಆಚರಿಸುತ್ತಿರುವಿರೋ ಅದನ್ನೇ ಮಾಡುತ್ತಿರಿ ಎಂದು ಹೇಳಿ ಹೊರಟುಹೋದನು. ಮಹಾಶ್ವೇತೆ ಕಾದಂಬರಿಯರು ತಾಳ್ಮೆಯಿಂದ ತಮ್ಮ ಸತ್ಕರ್ಮಗಳಲ್ಲಿ ನಿರತರಾಗಿದ್ದರು.

೬. ಕಪಿಂಜಲನು ಶ್ವೇತಕೇತುಗಳಲ್ಲಿಗೆ ಹೋಗಿ ನಡೆದುದನ್ನೆಲ್ಲ ನಿವೇದಿಸುವನು. ಮಗನ ಕಾಮವೃತ್ತಿಯೂ ಅದರ ಪರಿಣಾಮವೂ ತಿಳಿದು ತಾವು ಆಯುಷ್ಕಾಮ ಯಜ್ಞ ನಡಸದ್ದರಿಂದ ಹಾಗಾಯಿತೆಂದೂ ಬೇಗನೆ ಅದನ್ನು ನೆರವೇರಿಸಿ ಆತನ ದುರ್ಗತಿಗೆ ತಕ್ಕ ಪ್ರತೀಕಾರ ಮಾಡುವೆವೆಂದೂ ಅವರು ಹೇಳುವರು. ಕಪಿಂಜಲನಿಗೆ ಗೆಳೆಯನನ್ನು ಕಂಡಲ್ಲದೆ ಜೀವ ನಿಲ್ಲದಾಗಿ ಅವನಿರುವ ಬಳಿಗೆ ಹೋಗಲು ಗುರುಗಳ ಅಪ್ಪಣೆ ಬೇಡುವನು. ಶಾಪಗಳ ಫಲವಾಗಿ ಮಗನು ಗಿಳಿಯಾಗಿ ಹುಟ್ಟಿರುವುದನ್ನೂ ಪೂರ್ವದ ಸ್ಮೃತಿ ಇನ್ನೂ ಬಾರದಿರುವುದನ್ನೂ ಜ್ಞಾನದೃಷ್ಟಿಯಿಂದ ತಿಳಿದು ಇನ್ನೂ ಕೆಲವು ದಿನ ತಡೆಯುವಂತೆ ಹೇಳಿದವರು ಒಂದು ದಿನ ಕಪಿಂಜಲನನ್ನು ಕುರಿತು 'ಜಾಬಾಲಿಗಳ ಅನುಗ್ರಹದಿಂದ ನಿನ್ನ ಗೆಳೆಯನಿಗೆ ಈಗ ನೆನಪು ಮರಳಿದೆ, ನೀನು ಹೋಗಿ ತಂದೆ ಮಾಡುವ ಹೋಮ ಮುಗಿಯುವವರೆಗೂ ತಡೆದಿರು, ನಿನ್ನ ತಾಯಿಯೂ

ಯಜ್ಞಕಾರ್ಯದಲ್ಲಿ ಪರಿಚರ್ಯೆ ಮಾಡುತ್ತ ಇದನ್ನೇ ಹೇಳಿಕಳಿಸಿದ್ದಾಳೆಂದು ತಿಳಿಸು' ಎನ್ನುವರು. ಕಪಿಂಜಲನು ಬೇಗ ಜಾಬಾಲಿಗಳ ಆಶ್ರಮಕ್ಕೆ ಬಂದು ಗಿಳಿಯನ್ನು ಕಂಡು ಎತ್ತಿ ಮುದ್ದಾಡಿ ತನ್ನ ಸ್ನೇಹವನ್ನು ತೋಡಿಕೊಳ್ಳುವನು. ಗಿಳಿಗೆ ತಂದೆ ತಾಯಿಯರ ಸಂದೇಶವನ್ನೂ ಧೈರ್ಯವನ್ನೂ ಹೇಳಿ ಗುರುಗಳಲ್ಲಿಗೆ ಹಿಂದಿರುಗುವನು.

ಪೂರ್ವ ವೃತ್ತಾಂತ ತಿಳಿದಮೇಲೂ ಮಹಾಶ್ವೇತೆಯ ಮೇಲಿನ ಮೋಹ ಮುರಿಯದೆ ದಿನದಿನಕ್ಕೆ ಹೆಚ್ಚುತ್ತಿರುವುದನ್ನು ಕಂಡ ಗಿಳಿ ಅಲ್ಲಿಗೆ ಹಾರಿಹೋಗ ಬಯಸಿ ದಾರಿಯಲ್ಲಿ ಇದ್ದಕ್ಕಿದ್ದಹಾಗೆ ಬೇಡರ ಕೈಗೂ ಅವರ ಒಡತಿ ಚಂಡಾಲ ಕನ್ನೆಯ ಅಂಕೆಗೂ ಸಿಕ್ಕಿಬೀಳಬೇಕಾಗುವುದು. ಗಿಳಿಯ ಪಶ್ಚಾತ್ತಾಪಕ್ಕೆ ಮೇರೆಯಿಲ್ಲವಾಯ್ತು. ದೇವಋಷಿಯ ಮಗನಾಗಿ ಹುಟ್ಟಿ ಕಾಮಿತ್ವದಿಂದ ಕೀಳಾಗಿ ಚಂಡಾಲರ ಕೈಗೆ ಬೀಳಬೇಕಾದ ದುಃಸ್ಥಿತಿಗೆ ತನ್ನನ್ನು ತಂದುಕೊಂಡುದಕ್ಕಾಗಿ ಮರುಗುತ್ತ ಪ್ರಾಯೋಪವೇಶಮಾಡಿ ಜೀವ ಬಿಡಬೇಕೆಂಬ ಯೋಚನೆ ಬಂದಿತು. ಚಂಡಾಲ ಕನ್ನೆ ಬಹುವಿಧದಲ್ಲಿ ತಿಳಿವಳಿಕೆ ಹೇಳಿ ಸಮಾಧಾನ ಮಾಡಿರಲು, ಒಂದು ದಿನ ಇದ್ದಕ್ಕಿದ್ದಂತೆ ಹೊಲೆವಳ್ಳಿ ರಾಜಧಾನಿಯಂತಾಗಿ, ಚಂಡಾಲ ಕನ್ನೆ ದಿವ್ಯಾಂಗನೆಯಾಗಿ, ಹಸಿತೊವಲ ಪಂಜರ ಚಿನ್ನರನ್ನದ ಪಂಜರವಾದ್ದನ್ನು ಕಂಡು ಗಿಳಿ ಆಶ್ಚರ್ಯಪಡುತ್ತಿರಲು ಆ ಕನ್ನೆ ಅದನ್ನು ತೆಗೆದುಕೊಂಡು ಬಂದು ಶೂದ್ರಕ ಮಹಾರಾಜನಿಗೆ ಕಾಣಿಕೆಯಾಗಿ ಅರ್ಪಿಸುವಳು. ಪೂರ್ವಜನ್ಮ ಸಂಸ್ಕಾರದಿಂದ ಎಲ್ಲ ವಿದ್ಯೆಗಳೂ ಮರಳಿ ಸಿದ್ಧಿಸಿದ್ದುದರಿಂದ ಗಿಳಿ ರಾಜಾಶೀರ್ವಾದ ಮಾಡಿ ಎಲ್ಲರಿಗೂ ವಿಸ್ಮಯ ಉಂಟುಮಾಡುವುದು.

೭. ಇಷ್ಟಾದರೂ ಗಿಳಿಗೆ ಗೊತ್ತಿಲ್ಲ ಚಂಡಾಲ ಕನ್ನೆ ಯಾರೆಂಬುದು. ಆಕೆಯನ್ನು ಕರಸಿ ಕೇಳಲು ಗಿಳಿಯೇ ವೈಶಂಪಾಯನ-ಪುಂಡರೀಕ; ತಾನು ಪುಂಡರೀಕನ ತಾಯಿ, ಲಕ್ಷ್ಮಿ; ಈ ಹುಟ್ಟಿನಲ್ಲಿ ಕೂಡ ಕಾಮಮೋಹಿತನಾಗಿ ತಂದೆಯ ಯಜ್ಞ ಕರ್ಮ ಮುಗಿಯುವ ಮುಂಚೆ ಎಲ್ಲಿ ಪುನಃ ಅವಿವೇಕದಿಂದ ಕೇಡಿಗೆ ಒಳಗಾಗುವನೊ ಎಂಬ ಅಂಜಿಕೆಯಿಂದಲೂ ಅವನಿಗೆ ವಿರಕ್ತಿ ಹುಟ್ಟಿಸಬೇಕೆಂದೂ ತಾನು ಈ ರೀತಿ ಮಾಡಿದೆ; ಮರ್ತ್ಯಲೋಕ ಸಂಪರ್ಕ ಪರಿಹಾರಾರ್ಥವಾಗಿ ಚಂಡಾಲಳಂತೆ ವೇಷ ತಳೆದುಬಂದಿದ್ದೇನೆ ಎಂದೂ ಯಜ್ಞ ಇಂದಿಗೆ ಮುಗಿಯುವುದರಿಂದ ಇನ್ನೇನೂ ಭಯವಿಲ್ಲವೆಂದೂ, ಶೂದ್ರಕನೇ ಚಂದ್ರಾಪೀಡನಾಗಿದ್ದ ಚಂದ್ರದೇವನೆಂದೂ, ಅವರಿಬ್ಬರೂ ಸಮಸುಖದುಃಖಿಗಳಾಗಬೇಕಾಗಿ ಇನ್ನು ಈ ದೇಹಗಳನ್ನು ಬಿಟ್ಟು ದಿವ್ಯದೇಹ ಪಡೆದು ಇಷ್ಟಜನದೊಡನೆ ಸುಖವಾಗಿರಬಹುದೆಂದೂ ಹೇಳಿ,

ಝಣ ಝ್ಝಣಿತ ಮೇಖಲಾಕಲಿತ ಹಾರ ಕೇಯೂರ ಭೂ
ಷಣ ಪ್ರಭೆ ದಿಗಂತಮಂ ಬೆಳಗೆ, ರಾಜರಾಜಗೃಹಾಂ
ಗಣ ಸ್ಥಿತ ಜನಕ್ಕೆ ವಿಸ್ಮಯಮನಾಗಿಸುತ್ತುಂ ನಭೋಂ
ಗಣಕ್ಕೆ ಒಗೆದಳಂದು ಲಕ್ಷ್ಮಿ, ಕುಡುಮಿಂಚಿನೊಂದುಂ—ಎಂಬಿನಂ.

ಶೂದ್ರಕನೂ ಗಿಳಿಯೂ ಆ ದೇಹಗಳನ್ನು ಬಿಟ್ಟು ಸದ್ಗತಿ ಹೊಂದುವರು.

ಕಾದಂಬರಿಯ ಪ್ರೇಮಚರ್ಯೆಯಿಂದಲೂ ಸಂಸ್ಪರ್ಶದಿಂದಲೂ ಎದುರಿಗಿದ್ದ ದೇಹಕ್ಕೆ ಚೇತನ ಬಂದು ನಿದ್ರೆಯಿಂದೆಚ್ಚೆತ್ತಂತೆ ಚಂದ್ರಾಪೀಡನು ಏಳುವನು. ಅದರ ಸಂತೋಷದಲ್ಲಿ ಇವರಿರುವಾಗ ಆಕಾಶದಿಂದ ಪುಂಡರೀಕನು ಇಳಿದು ಬರುವನು. ಪ್ರಿಯರಿಗೆ ಎರಡೂ ಕಡೆಯ ಹಿರಿಯರ ಒಪ್ಪಿಕೆ ಹರಕೆಗಳಿಂದ

ಲೋಕೋಚಿತವಾದ ವಿವಾಹಮಂಗಳ ನೆರವೇರುವುದು. ಕಾದಂಬರಿಯ ಪ್ರಶ್ನೆಗೆ ಉತ್ತರವಾಗಿ ಪತ್ರಲೇಖೆ ಚಂದ್ರನ ಪತ್ನಿ ರೋಹಿಣಿಯೆಂದೂ ಆತನನ್ನು ಅಗಲಿರಲಾರದೆ ಆ ರೂಪ ದಲ್ಲಿ ಹುಟ್ಟಿ ಬಂದು ಆತನ ಶುಶ್ರೂಷೆ ಮಾಡುತ್ತಿದ್ದಳೆಂದೂ ಚಂದ್ರನು ತಿಳಿಸುವನು. ಇಷ್ಟವಾದ ವಿನೋದವಿಹಾರಸುಖಗ ಳಲ್ಲಿ ಉಜ್ಜಯಿನಿ, ಲಕ್ಷ್ಮೀಸರಸ್ಸು, ಚಂದ್ರಲೋಕಗಳಲ್ಲಿದ್ದು ಕೊಂಡು ಎಲ್ಲರೂ ಕಲ್ಯಾಣಪರಂಪರೆಗಳನ್ನು ಪಡೆಯುವರು.

೮. —ಸ್ಥೂಲವಾಗಿ ಇದು ಕಥೆ. ಕಥೆ ಮೊದಲಾಗುವುದು ಶೂದ್ರಕನ ಆಸ್ಥಾನದಲ್ಲಿ; ಚಂಡಾಲಕನ್ನೆ ಗಿಳಿಯನ್ನು ತಂದು ರಾಜನಿಗೆ ಒಪ್ಪಿಸುವ ಪ್ರಸಂಗದಿಂದ. ಗಿಳಿ ತಾನು ಜಾಬಾಲಿಗಳ ಆಶ್ರಮಕ್ಕೆ ಹೋಗಿ ಸೇರುವವರೆಗೂ ತನ್ನ ಕಥೆ ಹೀಗೆಂದು ರಾಜನಿಗೆ ವಿವರಿಸುವುದು. ಆಶ್ರಮಕ್ಕೆ ಒಯ್ದಾಗ ಪೂರ್ವಕಥೆ ಅದಕ್ಕೆ ತಿಳಿದಿರಲಿಲ್ಲ. ಋಷಿ ಆ ವೃತ್ತಾಂತವನ್ನು ಮುನಿಗಳಿಗೆ ಆರಾತ್ರಿ ತಿಳಿಯ ಹೇಳಿದಾಗ ಅದಕ್ಕೂ ತಿಳಿಯುವುದು. ನಡು ವೆಯ ಸಂಗತಿಗಳ ಕೆಲವು ಭಾಗ ಜಾಬಾಲಿಗಳ ಮಾತಿನಲ್ಲಿಯೂ ಕೆಲವು ಮಹಾಶ್ವೇತೆ ತರಳಿಕೆ ಮುಂತಾದವರ ಮಾತಿನಲ್ಲಿಯೂ ಮುಂದೆ ಕೆಲವು ಭಾಗ ಗಿಳಿಯ ಮಾತಿನಲ್ಲಿಯೂ ಇವೆ. ಹೀಗೆ ಹಲವರ ಬಾಯಿ ಹೊಕ್ಕು ಅವರೇಎದುರಿಗೆ ಬಂದು ಹೇಳುವಂತೆ ಅತಿ ಕುತೂಹಲಜನಕವಾಗಿ ಬಣ್ಣಿಸಿರುವ ಮೂರು ಜನ್ಮದ ಕಥೆ ಕಾದಂಬರಿಯ ಕಥೆ. ಕಥೆಯ ಒಳಗೆ ಕಥೆ, ಅದರೊಳಗೆ ಮತ್ತೊಂದು ಕಥೆ – ಹೀಗೆ ಹಬ್ಬಿದೆ. ಜನ್ಮಾಂತರ ಕಥೆಗಳೆಲ್ಲ ಇಷ್ಟು ಸುಂದರಮೋಹಕವಾಗಿದ್ದು ಒಂದೊಂದೂ ಬದುಕಿನ ಹೊಸದರ್ಶನವನ್ನು ತೋರಿಸುತ್ತ ಬೆಳೆದಿದ್ದರೆ ನಮ್ಮ ಸಾಹಿತ್ಯ ಸಂಪತ್ತಿಗೆ ಯಾವುದು ಸಾಟಿಯಾಗಬಲ್ಲದಾಗಿತ್ತು ?

ಒಟ್ಟಿನಲ್ಲಿ ಇದೊಂದು ಪ್ರೇಮದ ಮಹಾಚರಿತ್ರೆ. ಇಲ್ಲಿನದು ಸೌಂದರ್ಯದ ಮತ್ತು ಕರುಣೆಯ ಪ್ರಪಂಚ. ಪುಂಡರೀಕ ಮಹಾಶ್ವೇತೆಯರ ಪ್ರೇಮ; ಕಾದಂಬರಿ ಚಂದ್ರಾಪೀಡರ ಪ್ರಣಯ; ಅವುಗಳ ಹುಟ್ಟು, ಬೆಳೆವಣಿಗೆ, ಪರಿಣಾಮಗಳು; ಸಂಬಂಧಿಸಿದ ಪ್ರಕೃತಿ, ವ್ಯಕ್ತಿ, ವ್ಯವಹಾರಗಳ ವರ್ಣನೆ; ಉಂಟಾಗುವ ಸುಖದುಃಖದ ಅನುಭವ – ಇವು ಕಾವ್ಯವನ್ನು ತುಂಬಿವೆ. ಮೂರು ಹುಟ್ಟುಗಳಕಾಲ ಪ್ರಿಯರಿಗಾಗಿ ಕಾದು ತೊಳಲಿದ ಜೀವರು ತಮ್ಮ ಪ್ರೇಮಪ್ರಭಾವದಿಂದ ಇಷ್ಟಾರ್ಥ ಪಡೆದು ಹೇಗೆ ಸುಖಿಯಾಗುವರೆಂಬ ವಸ್ತು ಇಲ್ಲಿಯದು.

೯. ಕಾದಂಬರಿಯ ಮೂಲ ಬೃಹತ್ಕಥೆ. ಆದರೆ ಅಲ್ಲಿನದೆಲ್ಲ ಎಷ್ಟು! ವಿಗ್ರಹ ಶಿಲ್ಪಿಗೆ ಸಿಕ್ಕುವ ಕಲ್ಲಿನಂತೆ ಮಾತ್ರ. ಶ್ರೇಷ್ಠಕವಿಯ ಕಣ್ಣಿಗೆ ಪದಾರ್ಥಬಿದ್ದಕೂಡಲೆ ಅದಕ್ಕೆ ಇಲ್ಲದಿದ್ದ ಆಕೃತಿ ಮೂಡುತ್ತದೆ; ಚೆಲುವು ಹೊಮ್ಮುತ್ತದೆ; ರಸ ತುಂಬುತ್ತದೆ. ಕಲ್ಪನೆ ಕೆರಳಿಸುತ್ತದೆ. ನೆಲ, ನೀರು, ಬಾನುಗಳ ಮೇಲೆ ಹಿಂದೆ ಕಾಣದಿದ್ದ ಪ್ರಪಂಚವೊಂದು ಹುಟ್ಟಿಕೊಂಡು ವಸ್ತುಪ್ರಪಂಚ ಸುಳ್ಳು ಇದೇ ನಿಜ ಎಂಬ ಭ್ರಾಂತಿ ಉಂಟುಮಾಡುತ್ತದೆ. ಎದುರ ಲೋಕ ಒರಟು, ಇದು ನಯ, ಹಸನುಮಾಡಿದುದು, ಶೋಧಿಸಿದ್ದು, ಭವ್ಯವಾದ್ದು ಎಂಬಂತೆ ತೆಗೆದುಕೊಂಡ ಕಥೆಯನ್ನು ನಯಮಾಡಿ ರಸಕೃತಿಯಾಗಿ ಸಾವಿಲ್ಲದ ಸೌಭಾಗ್ಯವನ್ನಾಗಿಸಿದ ಕೀರ್ತಿ ಬಾಣಭಟ್ಟನದು. ಏಳನೆಯ ಶತಮಾನದಲ್ಲಿ ಹರ್ಷನ ಆಸ್ಥಾನದಲ್ಲಿ ಮಾನ್ಯನಾದ ಆತನು ತನ್ನಕಾಲದ ನಾಜೂಕು, ನಾಗರಿಕತೆ, ವೈಭವಗಳನ್ನು ಈ ಕಥೆಗೆ ಹಿಂಡಿದ್ದಾನೆ. ಸ್ವಂತಲೋಕಾನುಭವ ಮತ್ತು ಬದುಕಿನ ನೆನಪುಗಳನ್ನು ಸೇರಿಸಿದ್ದಾನೆ. ಪ್ರತಿಭೆ, ವಸ್ತುರಚನೆ,

ವರ್ಣನೆ ಮತ್ತು ಕಥನಕೌಶಲದಿಂದ ಪಂಕ್ತಿಪಂಕ್ತಿಯಲ್ಲಿಯೂ ಸಂತೋಷ ಉಕ್ಕಿಸುತ್ತಾನೆ. ಅರ್ಧಕಾವ್ಯ ಬರೆದು ಆತನು ತೀರಿಕೊಂಡನು. ಮಗ ಭೂಷಣಭಟ್ಟನು ಕಥಾವಸ್ತುವನ್ನೂ ತಂದೆಯ ಹೃದಯವನ್ನೂ ಅರಿತಿದ್ದುದರಿಂದಲೂ ತಾನೇ ಕವಿ ಯಾದ್ದರಿಂದಲೂ ಅದನ್ನು ಬರೆದು ಮುಗಿಸಿದನು. ಬಾಣ ವಾಣಿಯ ಎದುರು ಈತನ ಕೈಚಳಕ ಎರಡನೆಯ ಮಟ್ಟದ್ದಾಗಿ ಕಾಣಬಹುದು. ಕವಿತ್ವದರ್ಪದಿಂದ ಬರೆಯುತ್ತಿಲ್ಲ, ಭೀತನಾಗಿ ಬರೆಯುತ್ತಿದ್ದೇನೆಂದು ವಿನಯನುಡಿದರೂ ಮೇಲ್ತರದ ಕಲ್ಪನಾ ಶಕ್ತಿ ಮತ್ತು ಬರವಣಿಗೆ ಆತನಲ್ಲಿಯೂ ಕಾಣುವುದು. ಕನ್ನಡಿ ಸಿದ ಕವಿ ಒಬ್ಬನೇ ಆದ್ದರಿಂದ ಕರ್ನಾಟಕ ಕಾದಂಬರಿಯ ಬರವಣಿಗೆ ಒಂದೇ ನೆಯ್ಗೆಯದಾಗಿದೆ.

ಬಾಣ ಕಾದಂಬರಿ ಗದ್ಯ ಕೃತಿ; ನಡುವೆ ಎರಡು ಆರ್ಯೆ ಗಳನ್ನು ಬಿಟ್ಟರೆ ಉಳಿದ ಕಥೆಯೆಲ್ಲ ಗದ್ಯದಲ್ಲಿದೆ. ಆದರೆ ಎಂತಹ ಗದ್ಯ! ಗದ್ಯವೇ ಕವಿಗಳ ಒರೆಗಲ್ಲು ಎಂದು ರಸಿಕರು ಹೇಳಿ ತಲೆದೂಗುವಂತೆ ಬರೆದದ್ದು. ಬಾಣನ ಎಂಜಲು ಕವಿ ಪ್ರಪಂಚವೆಲ್ಲ ಎಂಬಷ್ಟು ವಿವಿಧವಾಗ್ವಿಲಾಸವುಳ್ಳದ್ದು. ಆತನ ಕೃತಿಶಕ್ತಿ ಒಂದು ಬಗೆಯಲ್ಲಿ ಎಲ್ಲೆ ಮುಟ್ಟಿದೆ. ಆ ಬಗೆಯ ಬರವಣಿಗೆಯನ್ನು ವಿಸ್ತರಿಸುವ ಸತ್ವ, ಬೇರೆ ಕವಿಗಳಿಗೆ ಸಾಧ್ಯ ವಿಲ್ಲದಷ್ಟು ಚೆಲುವಿನ ಮಾತು, ಅರ್ಥ, ಅಲಂಕಾರ, ರಸ, ಕಥನ ವರ್ಣನಾ ಚಮತ್ಕೃತಿ ಇವೆ ಕಾದಂಬರಿಯಲ್ಲಿ. ಆ ಸೊಬಗಿಗೆ ಸೋತ ಕನ್ನಡಕವಿ ನಾಗವರ್ಮನು ಕರ್ನಾಟಕ ಕಾದಂಬರಿ ಎಂಬ ಈ ಪ್ರೌಢ ಚಂಪೂ ಕಾವ್ಯ ಬರೆದನು. ದೋಷವೊಂದದ ಅಲಂಕಾರದ ವಸ್ತುಬಂಧನಿದು ತಾನೇಂ ಮಾಡದು, ಏಂಗೆ ಯ್ಯದೊ! ಎಂದು ಆತನು ಹೇಳಿಕೊಳ್ಳುತ್ತಾನೆ.

೧೦. ಕವಿ ನಾಗವರ್ಮನ ವಿಷಯ ನಮಗೆ ಹೆಚ್ಚಾಗಿ ತಿಳಿಯದು. ಈತನು ಹನ್ನೊಂದನೆಯ ಶತಮಾನದವನೆಂದು ಕಾಣುತ್ತದೆ. ಬಹುಶಃ ಶೈವಬ್ರಾಹ್ಮಣನು. ಇತರ ಯಾವ ಗ್ರಂಥಗಳನ್ನು ಬರೆದನೆಂಬುದಕ್ಕಾಗಲಿ ಈತನೇ ಛಂದೋಂಬುಧಿಯನ್ನು ಬರೆದವನು ಎಂಬುದಕ್ಕಾಗಲಿ ಖಚಿತ ಪ್ರಮಾಣಗಳಿಂದ ತೀರ್ಮಾನ ದೊರಕಿಲ್ಲ. ಈತನಿಗೆ ಆಶ್ರಯಕೊಟ್ಟ ರಾಜ ಚಂದ್ರನೆಂಬವನು. ಈ ಚಂದ್ರ ಯಾರೆಂಬುದು ನಿಷ್ಕರ್ಷೆಯಾಗಿಲ್ಲ. ಭೋಜರಾಜನು ಈತನ ಕೃತಿಗೆ ಮೆಚ್ಚಿ ಕಾಳಿಂಗ, ಕಾಂಭೋಜ, ಬಾಹ್ಲೀಕ ಜಾತಿಯ ಕುದುರೆಗಳನ್ನು ಬಹುಮಾನವಾಗಿ ಕೊಟ್ಟನೆಂದು ಕವಿ ಹೇಳುತ್ತಾನೆ. ಕವಿಗೆ 'ಬುಧಾಬ್ಜವನ ಕಳಹಂಸ 'ಎಂಬ ಬಿರುದಿದ್ದಿತೆಂದು ತೋರುತ್ತದೆ. ಜಾತಿಯ ಕುದುರೆಗಳ ಬಹುಮಾನ ತೆಗೆದುಕೊಳ್ಳಬೇಕಾಗಿದ್ದರೆ ಈತನು ವೀರಯೋಧನೂ ಆಗಿದ್ದಿರಬೇಕು. ಇದಕ್ಕೆ ಮಿಂಚಿದ ಸಂಗತಿಗಳಾವುವೂ ಈತನ ಸಂಬಂಧದಲ್ಲಿ ದೊರಕವು.

೧೧. ಕಾದಂಬರಿಯ ಕಥೆ ಭೂಮಿ ಅಂತರಿಕ್ಷಗಳಿಗೆ ಸಂಬಂಧಪಟ್ಟದು. ಗಂಧರ್ವ ಕನ್ಯೆ ಕಾದಂಬರಿಯ ಜೀವನದಲ್ಲಿಯೂ ಸಂಸ್ಕೃತ ಸಾಹಿತ್ಯದಲ್ಲಿ ಬಾಣಕಾವ್ಯದಂತಹ ಅಮರಕಾವ್ಯದಲ್ಲಿಯೂ ನೆಲಸಿ ವಿದಗ್ಧರ ಮೆಚ್ಚುಗೆ ಪಡೆಯಿತು; ನಾಗವರ್ಮನ ಕೃತಿಯಲ್ಲಿ ಕನ್ನಡ ಲೋಕಕ್ಕೆ ಹರಿಯಿತು. ಚಂದ್ರ ಸಹಚರಿಯಾಗಿ ಮೂರುಲೋಕದ ಸಂತೋಷವಾಗಿ ನಿಂತುದು ಕಾದಂಬರಿ.

ಬಾಣಕೃತಿಯಲ್ಲಿನ ಎಲ್ಲ ಗುಣವೂ ಕನ್ನಡ ಕಾವ್ಯದಲ್ಲಿದೆಯೆನ್ನುವುದು ಕಷ್ಟ. ಆದರೆ ಅದನ್ನು ರೂಪಿಸಲು ಕವಿ ಪ್ರಯತ್ನಿಸಿದ್ದಾನೆ. ಸಂಸ್ಕೃತದಲ್ಲಿ ಚೆನ್ನಾಗಿ ನುರಿತು ಮೂಲದ ಆಪ್ತ ಪರಿಚಯವಿದ್ದ ಕವಿ ಇದನ್ನು ಆರಿಸಿಕೊಂಡು ಗದ್ಯದಿಂದ

ಪದ್ಯಕ್ಕೆ ತಿರುಗಿಸುವಾಗ್ಗೆ ಅಲ್ಲಲ್ಲಿ ಕೆಲವು ವ್ಯತ್ಯಾಸಗಳು ಉಂಟಾಗಿವೆ: ಅಗತ್ಯವಾಗಿ ಕೆಲವು; ಬುದ್ಧಿಪೂರ್ವಕವಾಗಿ ಕೆಲವು. ಕವಿ, ವಿವೇಚನೆ ತೋರಿಸಿ ಕೆಲವು ಭಾಗ ಬಿಟ್ಟಿದ್ದಾನೆ; ವರ್ಣನೆಗಳಲ್ಲಿ ಕೆಲವನ್ನು ಮೊಟಕುಮಾಡಿದ್ದಾನೆ; ಕೆಲವನ್ನು ವಿಸ್ತರಿಸಿದ್ದಾನೆ; ಮೂಲದ ಚೆಲುವೆಲ್ಲ ಇಲ್ಲಿ ರೂಪುಗೊಳ್ಳದಿದ್ದರೂ ಅಲ್ಲಿನ ಪ್ರೌಢಿಯಂತಹ ಪ್ರೌಢಿಯನ್ನು ಪದ್ಯಗಳಲ್ಲಿ–ವಿಶೇಷವಾಗಿ ಗದ್ಯದಲ್ಲಿ, ವರ್ಣನೆಗಳಲ್ಲಿ–ತುಂಬಿದ್ದರೂ ಮನಸ್ಸುಮಾಡಿದ ಕಡೆ ತಿಳಿಯಾದ ಸುಲಭವಾದ ಅಚ್ಚಗನ್ನಡದಲ್ಲಿ ಎಲ್ಲರ ಮನಸ್ಸನ್ನೂ ಒಲಿಸುವಂತೆ ಬರೆಯಬಲ್ಲನು. ಈ ಗ್ರಂಥ ಒಟ್ಟಿನಲ್ಲಿ ಮೂಲಕಾವ್ಯವನ್ನು ಹತ್ತಿರದಲ್ಲಿ ಅನುಸರಿಸುವುದು. ಮೂಲದ ವೈಭವಗಳೆಲ್ಲ ಇಲ್ಲಿಲ್ಲ; ಹಾಗೆಯೇ ಅಲ್ಲಿನ ಬೇಸರ, ಕ್ಲಿಷ್ಟತೆ, ಕೃತಕತೆ, ಜಟಿಲತೆ, ಅತಿರೇಕಗಳು ಎಲ್ಲವೂ ಇಲ್ಲಿಲ್ಲವೆನ್ನಬಹುದು. ಆದರೂ ಅದರಿಂದಲೇ ಇದಕ್ಕೆ ಜೀವ. ಕಬ್ಬಿನ ರಸ, ಬೆಲ್ಲ, ಸಕ್ಕರೆ ಎಲ್ಲ ಒಂದೇ ಮೂಲ ಸಾಮಗ್ರಿಯ ರೂಪಾಂತರಗಳೇ – ಒಂದರ ರುಚಿ ಮಾತ್ರ ಒಂದಕ್ಕಿಲ್ಲ. ಮೂಲದ ಚೆಲುವು ಗಾಂಭೀರ್ಯ ವಿಜೃಂಭಣಗಳು ಅದಕ್ಕೇ ವಿಶೇಷವಾದವು. ಇದರ ಗರಿಮೆ ಇದಕ್ಕಿದೆ. ನಾಗವರ್ಮನ ಚಂಪೂಕಾವ್ಯ ಕನ್ನಡಿಗರೆಲ್ಲರಿಗೆ ಪ್ರೀತಿ ಉಂಟುಮಾಡಬಲ್ಲದು. ಸ್ವಂತಕ್ಕೆ ಗೌರವ ಸಂಪಾದಿಸಿಕೊಳ್ಳಬಲ್ಲದ್ದು.

———

## II. ಚಿತ್ರ, ಸನ್ನಿವೇಶ, ವ್ಯಕ್ತಿಗಳು

೧. ಮಾಳವದ ಶೂದ್ರಕ ಮಹಾರಾಜನ ಸಮೃದ್ಧಿ, ತೋಳ ಬಲ, ಕೀರ್ತಿ ವಿಜೃಂಭಿಸಿವೆ. ಪ್ರಭುವಾಗಿ ರಾಜ್ಯಭಾರದ ಚಿಂತೆ ಇಲ್ಲದೆಯೂ ಸತ್ವಗುಣೈಕಾಗ್ರಣಿಯಾಗಿಯೂ ಆತನು ಇದ್ದಾನೆ. ಮನ್ಮಥನಿಗೆ ಮೇಲಾದ ರೂಪ; ಹೊಸಯುವ್ವನ; ಸಂತತಿ ಬೇಕೆಂದು ಮಂತ್ರಿಗಳು ಬೇಡುತ್ತಿದ್ದಾರೆ; ಅಂತಃಪುರದ ಚೆಲುವೆಯರು ಒಲಿದು ಬಯಸುತ್ತಿದ್ದಾರೆ. ಆದರೆ ಏಕೋ ಅರಿಯದು ಜನ, –ಆತನಿಗೆ ಸ್ತ್ರೀಸುಖಬೇಕಿಲ್ಲ. (ಏಕೆ ಒಲ್ಲನೆಂಬುದೇ ಶೂದ್ರಕನವರೆಗೂ ಬಂದ ಕಥಾಪ್ರವಾಹದ ಒಯ್ಯಲು.) ವಿದ್ಯಾವಿನೋದ, ವಾದ್ಯವಾದನ, ಸಂಗೀತ, ಚಿತ್ರಕರ್ಮ, ಬೇಟೆ ಕಾವ್ಯರಚನೆ, ವೀರಕಥಾಪುರಾಣಶ್ರವಣ, ಮುನಿಶುಶ್ರೂಷೆ ಹೀಗೆ ಕಾಲಕಳೆಯುತ್ತಿದ್ದಾನೆ. ಈತನು ಒಂದು ದಿನ ಸಾಮಂತರೊಡನೆ ಓಲಗದಲ್ಲಿರಲು ಬಾಗಿಲವಳು ಬಂದು,

ಜನತಾಧೀಶ್ವರ, ಬಿನ್ನಪಂ. ತ್ರಿದಶಲೋಕಕ್ಕೇರುತಿರ್ದಾ ತ್ರಿಶಂ
ಕುನರಾಧೀಶನ ಲಕ್ಷ್ಮಿ ಶಕ್ರನ ಮಹಾಹುಂಕಾರದಿಂಬಿಳ್ದಳೆಂಬಿನೆಗಂ

ಚೆಲುವೆಯಾದ ಚಂಡಾಲಕನ್ನೆಯೊಬ್ಬಳು 'ದರ್ಶನತಾತ್ಪರ್ಯದೆ ರಾಜಕೀರ ಸಹಿತಂ ಬಂದಿರ್ದಪಳ್ ಬಾಗಿಲೊಳ್' ದಕ್ಷಿಣಾಪಥದವಳು ಎನ್ನುವಳು. ಆತನು ಸುತ್ತಲ ರಾಜಲೋಕದ ಮುಖ ನೋಡಿದನಂತೆ. ಆತನ ಮಾತಿಗೆ ಇದಿರಾರು? 'ದೋಷಮೇಂ? ಬರ್ಕೆ' ಎಂದನಂತೆ. ಆಕೆ ಬರುವಾಗ್ಗೆ ರಾಜನ ಶುಭ್ರಧವಳ * ವೈಭವವನ್ನು ಕವಿ ವರ್ಣಿಸುವನು. ಸಭೆ ನಿರೀಕ್ಷಣೆ

---

* ಚಾಮರ, ರತ್ನ, ಮುತ್ತು, ಸ್ಫಟಿಕ, ದಂತ, ಶಂಖ, ಪಾರದ, ಚಂದ್ರೋಪಲ, ಭಸ್ಮ, ನವಮಜ್ಜನ ಪಾಳಕಣ, ನೊರೆ, ಮಂಜು, ಮೃಣಾಳ,

ಯಲ್ಲಿದೆ. ಕೈಯ ಸಂಬಳಿಗೋಲಿಂದ ಆಕೆ ರನ್ನದ ನೆಲಗಟ್ಟನ್ನು ಒಂದುಸಲ ಕುಟ್ಟಲು ರಾಜವರ್ಗದ ಮೊಗವೆಲ್ಲ ಆಕಡೆ ತಿರುಗಿತು. ಆಕೆಯ ಹಿಂದೆ ಒಬ್ಬ ವೃದ್ಧ. ಮುಪ್ಪಿನಿಂದ ಆತನ ತಲೆ ನರೆತಿದೆ; ಕಣ್ಣು ಅರೆ ತೆರೆದ ಕೆಂದಾವರೆ; ವ್ಯಾಯಾಮದಿಂದ ಮೈ ಸಡಿಲದೆ ಇದೆ; ಮಾತಂಗನಾದರೂ ಆಕಾರ ನಿಷ್ಠುರವಲ್ಲ; ಬಿಳಿಯ ಬಟ್ಟೆ ಧರಿಸಿದ್ದಾನೆ. ಅವನ ಹಿಂದೆ ಹೊನ್ನ ಪಂಜರದಲ್ಲಿ ಅರಗಿಳಿಯನ್ನು ತರುತ್ತಿದ್ದ ಚಂಡಿಕೆ ಕಟ್ಟಿದ ಚಂಡಾಲ ಬಾಲಕ ಒಬ್ಬ. ಹೀಗೆ ಬಂದ ಮೂವರನ್ನೂ ನೋಡುತ್ತ ಕನ್ನೆಯ ರೂಪಿಗೆ ಆಶ್ಚರ್ಯಪಡುತ್ತ ಇತ್ತು ಸಭೆ.

೨. ಕನ್ನೆ ರಾಜನಿಗೆ ಪೊಡಮಟ್ಟು ಗಿಳಿಯ ಗುಣಗಳನ್ನು ವರ್ಣಿಸುವಳು. ತನ್ನ ಒಡತಿ ತಂದಿರುವ ಈ ಕಾಣಿಕೆಯನ್ನು ಕೈಕೊಳ್ಳಬೇಕೆಂದು ವೃದ್ಧನು ರಾಜನನ್ನು ಬೇಡುವನು. ಪಂಜರದಿಂದ ಹೊರಗೆಬಂದು ಗಿಳಿ ಮರ್ಯಾದೆಯಿಂದ ಬಲಗಾಲನ್ನು ಮೇಲೆತ್ತಿ ರಾಜಾಶೀರ್ವಾದ ಮಾಡುವುದು. ಕನ್ನೆ ಹೇಳಿದ್ದೊಂದಲ್ಲ, ನಿಜ ಬೇರೆಯಲ್ಲ. ಸ್ಪಷ್ಟವಾದ ಅದರ ಜಯಪಾತವನ್ನು ಕೇಳಿ ಎಲ್ಲರೂ ವಿಸ್ಮಯಪಟ್ಟರು. ಆ ನಡುವೆ

---

ಹಂಸ, ಅಮೃತಾಂಭೋರಾಶಿ, ಸುರನದೀಶೀಕರ, ತಾರಾಜಲ, ಎಳಮಿಂಚು, ಎಳಬಿಸಿಲು, ಪೂರ್ಣೇಂದುಕಲೆ, ತಾರಾವಳಿ, ಹರಹಾಸ, ಅನಂತಭೋಗ, ಉಗುರ-ಸುಲಿಪಲ್ಲ–ಕಣ್ಣ ಕಾಂತಿಗಳು ಹಂಸ, ಗೌರಿ, ಮಹಾಶ್ವೇತೆ ಎಂಬ ಹೆಸರು-ಯಾವಬಗೆಯಲ್ಲಿ ನೋಡಿದರೂ ಈ ಕಾವ್ಯದ ತುಂಬ ಒಂದು ವಿಶೇಷ ಲಕ್ಷಣವಾಗಿ ಬೆಳ್ಗಾಂತಿಯಿದೆ. ರಾಜಪರ್ಯಂಕದ ಮೇಲೆ ಬೆಳ್ಳನೆಯ ಹಚ್ಚಡ, ಕಾದಂಬರಿಯು ಎದುರು ಚಂದ್ರಾಪೀಡನಿಗಿಡುವ ಚಿನ್ನದ ಪೀಠದ ಮೇಲೆ ಬಿಳಿಯ ಹೊದಿಕೆ, ಕಾದಂಬರಿ ನೆಮ್ಮಿ ಕುಳಿತಿರುವುದು ಆದಿ ವರಾಹದ ಕೋರೆದಾಡೆಯಂತೆ ಬೆಳ್ಳಗಿರುವ ಕಾಳಿಡೆ.

ಮಧ್ಯಾಹ್ನ ಸೂಚಿಸುವ ಶಂಖಪ್ರಣಾದವಾಗಲು ಸಭೆ ಹರೆಯಿತು. ಎಲ್ಲರನ್ನೂ ವಿಶ್ರಮಿಸಿಕೊಳ್ಳ ಹೇಳಿ ಗಿಳಿಯನ್ನು ರಾಣಿಯರಲ್ಲಿಗೆ ಕಳಿಸಿ ರಾಜನೂ ಮಜ್ಜನ ಭೋಜನ ವಿಶ್ರಾಂತಿಗಳನ್ನು ಬೇಗ ಮುಗಿಸಿಕೊಂಡನು. ಗಿಳಿಯ ವೃತ್ತಾಂತವನ್ನು ತಿಳಿಯಬೇಕೆಂಬ ಕುತೂಹಲ ಒತ್ತುತ್ತಿರಲು ಅದನ್ನು ತರಹೇಳುವನು. ತಂದರು. ಅಪ್ಪಣೆಯಂತೆ ದೇವಿಯರು ಗಿಳಿಗೆ ಸ್ನಾನಮಾಡಿಸಿ ಕಳಿಸಿದ್ದಾರೆಂದು ಕಂಚುಕಿ ಹೇಳುವನು.

ರಾಜ--ದೇವಿಯರ ಅರಮನೆಯಲ್ಲಿ ನಿನಗೆ ಬೇಕಾದ್ದೇನೇನನ್ನು ಆಸ್ವಾದಿಸಿದೆ?

ಗಿಳಿ—ಏನೇನಭಿಮತವನ್ನೂ ಆಸ್ವಾದಿಸಿದೆನಿಲ್ಲ? ಕೋಗಿಲೆ ಕಣ್ ಕಾಂತಿಯುಳ್ಳ ನೀಲಪಾಟಲ ಜಂಜೂಫಲ ಮಧುರ ರಸವನ್ನು ಪಿರಿದಳ್ತಿಯಿಂ ಮನಂತಣಿಯೆ ಕುಡಿದೆ. ಸಿಂಹ ಸೀಳಿದ ಮದ್ದಾನೆಯ ಕುಂಭಸ್ಥಳದ ರಕ್ತಸೇಚನದಿಂದ ಆರ್ದ್ರವಾದ ಮುತ್ತುಗಳಂತೆ ಎಸೆವ ದಾಡಿಮಾ ಬೀಜಗಳನ್ನು ತೆಗೆದು ರಸವನ್ನು ಸವಿದೆ. ಫಲಾಸ್ವಾದನೆಯಿಂದ ತೃಪ್ತಿಯಾಯಿತು; ಗಳಹಲೇನು? ಅಮೃತವಾಯಿತು; ದೇವಿಯರು ಆದರದಿಂದ ತಮ್ಮ ಕೈಯಿಂದ ಊಡಿದರು.

ರಾಜ—ನೀನು ನುಡಿದಷ್ಟೂ ನಿನ್ನ ವಿಷಯದಲ್ಲಿ ವಿಸ್ಮಯ ಹೆಚ್ಚುತ್ತಿದೆ; ನಿನ್ನ ವೃತ್ತಾಂತ ಹೇಳು: ಎತ್ತಣದು ನಿನ್ನ ದೇಶ? ಹುಟ್ಟಿದೆ ಹೇಗೆ? ಹೆಸರು ನಿನಗೆ ಯಾವನಿಂದಾಯ್ತು? ವೇದ, ಸ್ಮೃತಿ, ಶಾಸ್ತ್ರ, ಕಲಾಸಂಪನ್ನತೆ ಹೇಗೆ ಉಂಟಾಯಿತು? ಸ್ಮೃತಿ, ಹುಟ್ಟಿ ಬಂದುದೊ? ವರಪ್ರಸಾದದಿಂದಾಯ್ತೊ? ಮರಸಲು ವಿಹಂಗವು ವೇಷಿಯಾದೆಯೊ? ಸಿಕ್ಕಿದೆ

ಹೇಗೆ? ಪಂಜರ ಬಂಧನ ಯಾವರೀತಿ ಆಯಿತು? ಈ ಚಂಡಾಲರ ಸಂಗತಿ ಹೇಗಾಯಿತು? ಇಲ್ಲಿಗೆ ಹೇಗೆ ಬಂದೆ?

೩. **ಗಿಳಿ ಹೇಳಿದ ಕತೆ**—ವಿಂಧ್ಯಾಟವಿಯ ತೆಂಕಲು. ಪಂಪಾಸರಸ್ಸಿನ ಪಡುವಿಗೆ ರಾಮಬಾಣದಿಂದ ಜರ್ಝರಿತವಾದ ತಾಳೆಯ ಗುಂಪಿದೆ. ಹತ್ತಿರ ಒಂದು ದೊಡ್ಡ ಹಳೆಯ ಬೂರುಗದ ಮರವಿದೆ. ಅದರ

> ತಳಿರ್ಗಳ ಇಪುಂಬಿನಲ್ಲಿ, ತುದಿಗೋಡ ಮೊದಲ್ಗಳ ತಾಣದಲ್ಲಿ, ನಾ
> ರ್ಗಳ ಪೊರೆಯಲ್ಲಿ, ಪೋಳ್ಗಳೆಡೆಯಲ್ಲಿ, ಕವಲ್ಕಣೆಯಲ್ಲಿ ಸುತ್ತಲುಂ
> ಗಿಳಿಗಳ ಪಿಂಡುಗಳ್ ನೆರೆದು ಕೂಡಿಯುಂ - ಅಲ್ಲಿ ಸಹಸ್ರಮುಂ ನಿರಾ
> ಕುಳಂ-ಅನುರಾಗದಿಂ ಪಲವು ದೇಶದೊಳ್-ಇರ್ಪುವು ಬಂದು ಭೂಪತೀ

ಬೂರುಗದಲ್ಲಿ ಎಲೆ ಕೆಲವೇ ಆದರೂ ತುಂಬ ಗಿಳಿಗಳಿರುವುದರಿಂದ ಎಲೆಗಳಿಂದಲೇ ತುಂಬಿ ಕತ್ತಲಿಟ್ಟಂತಿದೆ. ಅದರ ಒಂದು ಪೊಟರೆಯ ಅಲ್ಪಾವಕಾಶದಲ್ಲಿ ಒಂದು ಮುದಿಗಿಳಿ ತನ್ನ ಹೆಂಡತಿಯೊಡನೆ ವಾಸಮಾಡುತ್ತಿತ್ತು. ಆ ದಂಪತಿಗಳ ಒಂದೇ ಮರಿ ನಾನು. ಹೆರಿಗೆಯಲ್ಲಿ ನನ್ನ ತಾಯಿ ತೀರಿಕೊಂಡಿತು. ನನ್ನ ಮೇಲಿನ ವಾತ್ಸಲ್ಯದಿಂದ ಎದೆಬೇನೆ ಅಡಗಿಸಿಕೊಂಡು ತಂದೆ ನನ್ನನ್ನು ಕಾಪಾಡಿಕೊಂಡಿತ್ತು. ಸ್ವಂತಸ್ಥಿತಿಯೋ: ಮುಪ್ಪಿಂದ ದೇಹ ಸಡಿಲವಾಗಿದೆ; ಗರಿ ಒಂದೋ ಎರಡೋ ಉಳಿದಿರುವುದು; ಬಿದ್ದು ಕುಳಿಯಾಗಿದೆ ಕಿವಿ; ಹೆಗಲು ಜೋತು ಇಳಿದಿವೆ; ಹಾರಲು ಬಲವಿಲ್ಲ. ಆದ್ದರಿಂದ

> ಪಕ್ಕಿಗಳಲ್ಲಿ ತಿಂದುಳಿದ ನೆಲ್ಲಳನುಚ್ಚುಗಳಂ ಫಲಂಗಳಂ
> ಪಕ್ಕದೊಳಿರ್ದ ಗೂಡುಗಳಿನ್-ಆಯ್ದು ಎನಗಿಕ್ಕುವನಕ್ಕರಿಂದೆ; ತಾಂ
> ಮಿಕ್ಕುದನ್-ಉಂಡಪಂ; ಕಡಿದು ನೆಲ್ಗಳನ್-ಅಂಟಿದ, ತಾಳವಣ್ಣ ಬ
> ಣ್ಣಕ್ಕೆಣೆಯಾಪ ಚಂಚುಪುಟದಿಂದಮೆ ಮಜ್ಜನಕಂ ಮಹೀಪತೀ

ಹೀಗಿರಲು ಒಂದು ದಿನ ಬೆಳಗಾಯಿತು. ಹುಲ್ಗಳು ಹನಿಕರೆದುವು. ಕಣ್ತೆರೆದುವು ನವಿಲು. ಕರಿಣಿ ಎದ್ದು ಕರ್ಣಂಗಳನ್ನು ಎಚ್ಚರಿಸಿದುವು. ಪಿಂಗಳಿಗಳು ಬಾಯ ತೆರೆದುವು. ಅರುಣನಿಗೆ ವನ ಪಲ್ಲವ ಕರಗಳಿಂದ ಅರ್ಘ್ಯವೆತ್ತುತ್ತಿರುವುದೆಂಬಂತೆ ಹನಿವ ಹುಲ್ಲನೀರುಗಳೊಡನೆ ಅಲರು ಉದುರುತ್ತಿತ್ತು. ಧರ್ಮಪತಾಕೆಗಳೆನಿಸಿದ ಮುನಿಪರ ಅಗ್ನಿ ಹೋಮ ಧೂಮಗಳಂತೆ ಪಾರಿವಾಳ ನೆಗೆದುವು. ಕಮ್ಮಗೆ ತಂಗಾಳಿ ತೀಡಿತು. ಸರೋವರದಲ್ಲಿ ತುಂಬಿ ಮೊರೆದುವು. ಹರಿಣಸಮೂಹ ಕಣ್ಬಿಟ್ಟಿತು. ಸಂಚರಿಸುವ ವನಕರಿಗಳ ಕರ್ಣತಾಳ ಗಂಭೀರಧ್ವನಿ ಕೇಳುತ್ತಿರಲು ಗಂಡುನವಿಲು ನಲಿದು ನರ್ತಿಸಿತು. ಹೊತ್ತು ಹೀಗೆ ಮೂಡಲು ದೊಡ್ಡಗಿಳಿಗಳೆಲ್ಲ ಕುಟುಕುಗೊಳಲೆಂದು ಹೊರಗೆ ಹೋದುವು. ಗೂಡುಗಳಲ್ಲಿ ಮರಿಗಳೆಲ್ಲ ಇದ್ದರೂ ನಿಶ್ಶಬ್ದವಾಗಿ ಶೂನ್ಯದಂತಿತ್ತು. ಇತರರೊಡನೆ ಆಹಾರಕ್ಕಾಗಿ ಹೋಗಲು ಶಕ್ತಿಯಿಲ್ಲದೆ ನನ್ನ ತಂದೆ ಗೂಡಿನಲ್ಲಿಯೇ ಉಳಿಯಿತು. ಗರಿ ಹುಟ್ಟದಿದ್ದ ನಾನು ತಂದೆಯ ಬಳಿ ಉಳಿದೆ. ಅಷ್ಟುಹೊತ್ತಿಗೆ ಕಾಡಿನ ನಿಶ್ಶಬ್ದವನ್ನು ಸೀಳಿಕೊಂಡು ವಿಂಧ್ಯವನ್ನು ನಡುಗಿಸುವಂತಹ ಬೇಟೆಯ ಅಬ್ಬರ ಕೇಳಿಬಂತು.

ತಂದೆಯ ರೆಕ್ಕೆಯೊಳಗಿದ್ದುಕೊಂಡೇ, ಅಂಜಿ ಇವನ್ನೆಲ್ಲ ಕೇಳುತ್ತಿರಲು ಇದ್ದಕ್ಕಿದ್ದಂತೆ ಶಬ್ದ ನಿಂತಿತು. ನಂಜಿನ ಮಳೆ ಕೊಂಡು ಬಿಟ್ಟಂತಾಯಿತು. ಆಗ ರೆಕ್ಕೆಯೊಳಗಿಂದ ಹೊರಟೆ. ಆದರೆ ಪೊಟರೆಯಲ್ಲಿಯೇ ಇದ್ದುಕೊಂಡು ಮೆಲ್ಲನೆ ನಿಕ್ಕಿ ನಿಕ್ಕಿ ಭಯಪಡುತ್ತ ಹೊರಗೆ ನೋಡಿದೆ. ಕಿರಾತರ ಪಡೆ ನಮ್ಮ ಕಡೆಗೇ ಬರುತ್ತಿತ್ತು. ಅಷ್ಟು ಹೊತ್ತಿಗೆ ಮತ್ತೊಬ್ಬ ಮುದಿ ಬೇಡನು ಆ ಬಳಿಗೆ ಬಂದನು. ಜರೆಯಿಂದ ಅವನ ಹುಬ್ಬು

ಜೋಲುತ್ತಿತ್ತು. ಮುಖದ ತುಂಬ ಸುಕ್ಕು. ಗಂಟಲು ಮುರಿದತ್ತ ಸೆರೆ ಒಡೆದು ತೋರುವುವು. ಒತ್ತಿಬರುವ ಕೆಮ್ಮಿಂದ ಬೆಟ್ಟಗಳು ಬಿರಿವಂತಿತ್ತು. ಸ್ವಲ್ಪವೂ ಮಾಂಸ ಸಿಕ್ಕಲಿಲ್ಲವೆಂದು ಆತುರವುಂಟಾಗಿ ಬೂರುಗಕ್ಕೆ ಬಂದನು. ಬೇಡಿದರೂ ಮಾಂಸ ಭಾಗಕೊಡದೆ ಇತರ ಬೇಡರು ಹೋಗಿದ್ದುದರಿಂದ ಅವನ ಕಣ್ಣು ರಕ್ತವಾಗಿತ್ತು. ಮೇಲಿದ್ದ ಗಿಳಿಗಳೆಲ್ಲದರ ಜೀವವನ್ನೂ ಕಣ್ಣುಗಳಿಂದ 'ಎಯ್ದಿ' ಹೀರುವಂತೆ, ಗೂಡುಗಳನ್ನು ಮುಟ್ಟಿ ಎಣಿಸುವಂತೆ ಮರವನ್ನು ನೋಡಿದನು. ಅನೇಕ ತಾಳ ಉನ್ನತವಾದ್ದು ಮರ, ಏರಲು ಕಷ್ಟ ಎಂಬುದನ್ನು ಬಗೆಯಲಿಲ್ಲ. ಬಳಸಿದ ಬಳ್ಳಿ ಹಿಡಿದು ಏರಿ ಗೂಡುಗಳಿಗೆ ಕೈಯಿಟ್ಟನು.

ಜಳಜದ ಮೊಗ್ಗೆಯಂತೆ, ಮುಗುಳಂತೆ, ಎಳಎಕ್ಕೆಯ ಕಾಯ್ಗಳಂತೆ, ಶಾಲ್ಮಲಿ ಕುಸುಮಂಗಳಂತೆ, ತರುನೀಡನಿಕಾಯದಿನ್-ಎಲ್ಲಂ-ಆಗಳಾಗಳೆ ಗರಿವೊಯ್ದ, ಕಣ್ದೆರೆವ, ತುಪ್ಪುಳ್-ಒಡರ್ಚುವ, ಕೆಂಪನಾಳ್ದ ಕೋಮಳ ಶುಕಶಾಬಕ ಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ-

ಸಾಲವೆಂದು——

> ಪರಿದುವು ಗರಿ, ಚಂಚುಗಳುಂ
> ಮುರಿದುವು, ತಲೆನಡುಗುತಿರ್ಪುವು ಎನ್ನದೆ ತರದಿಂ
> ಬರಿಗೆಯ್ಯುತಿರ್ದನ್-ಆ ಮಾ-
> ಯ್ದರಗುಲಿ ಕರ್ವೇಡನ್-ಅಲ್ಲಿ ಮುದುಗಿಳಿಗಳುಮಂ

ತೆಗೆಯುವುದು, ಗಂಟಲು ಮುರಿಯುವುದು, ನೆಲಕ್ಕೆ ಬೀಸಾಡುವುದು ಇದೇ ಕೆಲಸವಾಯಿತು. ಪ್ರಾಣಾಪಾಯ ಬಂದದ್ದು ತಂದೆಗೆ ಗೊತ್ತಾಯಿತು. ಶಕ್ತಿ ಕುಂದಿ ಕಣ್ಣೀರಿಡುತ್ತ, ದಿಕ್ಕೆಟ್ಟು ನನ್ನನ್ನು ನೋಡಿ, ಮಗನೆ, ನಿನ್ನನ್ನು ಇನ್ನಾರು ಕಾಯಲಾಪರು? ಎಂದು ಬಿಸುಸುಯ್ಯುತ್ತ ಬಂದ ಸಂಕಟಕ್ಕೆ ಮರುಗುತ್ತ ಇಷ್ಟು

ಬಗೆಯಲ್ಲಿ ಸಾಕಿದ ಮರಿಯೊಡನೆ ತನಗೂ ಸಾವು ಬಂದುದಕ್ಕೆ ಬೆದರಿ, ಸೈರಿಸಲಾರದೆ, ತೊಡೆಯಲ್ಲಿ ನನ್ನನ್ನು ಇರಿಕಿಕೊಂಡು, ಹರಿದ ರೆಕ್ಕೆಗಳಿಂದಲೇ ಮುಚ್ಚಿ ಮರೆಮಾಡಿ, ಮೋಹದಿಂದ ತಂದೆಯಿರಲು ಪಾಪಿ ಬೇಡನು ಅಲ್ಲಿಗೂ ಬಂದು ಕೈಯಿಟ್ಟನು.

ಕಾಡಹಂದಿಗಳ ಬಲ್ಕೆಣದಿಂದ ಆ ಕೈ ಹೊಲಸಂಟಿ ನಾರು ತ್ತಿತ್ತು. ಬಿಲ್ಲಹಗ್ಗದ ಪೆಟ್ಟು ಬಿದ್ದು ಆದ ಹುಣ್ಣುಗಳಿಂದ ತೊರೆವ ನೆತ್ತರ ಕೈ ನಡುಗುತ್ತಿತ್ತು. ಕಾಳಸರ್ಪದಂತೆ ಕಾಲದಂ ಡದಂತೆ ಇದ್ದ ಅದನ್ನು ನೀಡಿ, ತಂದೆ ಕೀಳಿಡೆ ಇಡೆ, ಒಮ್ಮೆಗೇ ಅದರ ಗಂಟಲು ಮುರಿದನು. ತಂದೆ ನೆಲಕ್ಕೆ ಬೀಳುವಾಗ ಗರಿ ಯೊಳಗೆ ಇದ್ದ ನಾನು ಬೇಡನ ಕಣ್ಣಿಗೆ ಬೀಳಲಿಲ್ಲ. ಗಾಳಿಯಲ್ಲಿ ತೂರಿ ದೂರದ ತರಗೆಲೆಯ ರಾಸಿಯಲ್ಲಿ ಬಿದ್ದುದರಿಂದ ಉಳಿ ದುಕೊಂಡೆ. ಆಮೇಲೆ ಮರದಿಂದ ಇಳಿದು ನೆಲದಮೇಲೆ ಚೆದರಿ ಬಿದ್ದ ಶುಕಸಮೂಹವೆಲ್ಲವನ್ನೂ ಬೇಗ ಮೂಟೆಕಟ್ಟಿ ನಡುಬೆನ್ನು ಇಳಿವಂತೆ ಹೊತ್ತು ಅವನು ಹೊರಟು ಹೋದನು.

ಸಾಯದೆ ಉಳಿದ ನನಗೆ ಭಯ, ಆಯಾಸ ಶೋಕಗಳಿಂದ ದಿಕ್ಕುತೋರದಾಯಿತು. ಹಾರಲೆಂದರೇನೊ ಅರಿಯೆ. ಬಾಯಿ ಬತ್ತುತ್ತಿದೆ. ಚಲಿಸಿದರೆ ತರಗೆಲೆ ಗಿರಿಕೆನ್ನುವುದು. ಅದನ್ನು ಕೇಳಿ ದೊಡನೆ ಬೇಡನು ಹಿಂದಕ್ಕೆ ಬಂದನೇನೊ ಎಂಬ ಭೀತಿ. ಹೀಗಿ ದ್ದರೂ ಮೆಲ್ಲನೆ ಎದ್ದು ಸುತ್ತಲೂ ನೋಡಿ ಒಬ್ಬರೂ ಕಾಣದಿ ರಲು ಎದೆ ನೀವಿಕೊಂಡು ನೀರೆಡೆಗೆ ಹೋಗಲು ಉದ್ಯೋಗಿಸಿದೆ. ತಂದೆ ಹಾಗೆ ಸತ್ತಿದ್ದರೂ ಸ್ವಂತ ಬಳಲಿಕೆ ಬಾಯಾರಿಕೆಗಳಿಂದ ಕಂಗೆಟ್ಟ ನನ್ನನ್ನು ಕಂಡು ನನಗೇ ಬೇಸರವಾಯಿತು. ವಿಷಾದ ವಾಯಿತು. ಪ್ರಾಣವುಳಿಸಿಕೊಳ್ಳಬೇಕೆಂಬಾಸೆ ಜೀವಿಗಳಿಗೆ ಎಷ್ಟು ಹೆಚ್ಚಿನದು ಎಂಬುದು ಆಗ ತಿಳಿಯಿತು. ಆದರೂ

ಬಿಸಿಲ ಬೇಗೆ ಹೆಚ್ಚಾಗಿ ನೀರಡಿಕೆಯಿಂದ ಸಾಯುವಂತಾಗಿತ್ತು.

ಇಷ್ಟುಹೊತ್ತಿಗೆ ಹಾರೀತನೆಂಬ ಋಷಿಕುಮಾರನು ಅಲ್ಲಿಗೆ ಬಂದವನು ನನ್ನ ಸ್ಥಿತಿಯನ್ನು ನೋಡಿ ಮರುಕಗೊಂಡು ತಂಪು ತಳಿದು, ನೀರು ಕುಡಿಸಿ, ತಾವರೆಯ ಎಲೆಯ ನೆರಳಿನಲ್ಲಿಟ್ಟಿದ್ದು, ತಾನು ಮಾಧ್ಯಾಹ್ನಿಕಮಾಡಿಕೊಂಡು ನನ್ನನ್ನು ತನ್ನ ಆಶ್ರಮಕ್ಕೆ ತೆಗೆದುಕೊಂಡು ಹೋದನು. ನನ್ನನ್ನು ಕಂಡು ಅಲ್ಲಿನ ಋಷಿಗಳಿಗೆ ಕುತೂಹಲವುಂಟಾಯಿತು. ಹಿರಿಯ ಋಷಿ ಜಾಬಾಲಿಗಳು ಒಂದು ನಿಮಿಷ ಧ್ಯಾನಿಸಿ ಪುಣ್ಯಜಲದಿಂದ ತೊಳೆಯುವಂತೆ ಶಾಂತ ದೃಷ್ಟಿಗಳಿಂದ ನನ್ನನ್ನು ನೋಡಿ,

ಈತಂ ಮುನ್ನಿನ ಭವದೊಳ್
ನೀತಿಯನುಳಿದೆಸಗಿ ಮೋಹದಿಂ ತಿರ್ಯಕ್-
ಜಾತಿಗೆ ಬಿಳ್ದು-ಒರಂಪದಿನ್-
ಈತೆರದಿಂ ಕರ್ಮಫಲಮನ್-ಉಂಡಪನ್ತೇ:

ಎಂದು ಮಾತ್ರ ಆಗ ಹೇಳಿ, ಆ ರಾತ್ರಿ ನನ್ನ ಕಥೆಯನ್ನೆಲ್ಲ ವಿವರಿಸಿದರು:

ನಾನು ಪುಂಡರೀಕ ವೈಶಂಪಾಯನ; ಚಂದ್ರಾಪೀಡನು ಚಂದ್ರ; ನಮಗಾಗಿ ಮಹಾಶ್ವೇತೆಕಾದಂಬರಿಯರು ವ್ರತಹಿಡಿದು ಕಾದಿರುವರು; ಗೆಳೆಯ ಕಪಿಂಜಲನು ನನಗೋಸ್ಕರ ಕುದುರೆಯಾಗಿ ಹುಟ್ಟಿ ಕಷ್ಟಪಡಬೇಕಾಯಿತು; ಎಲ್ಲ ಹುಟ್ಟುಗಳಲ್ಲಿಯೂ ಹೆತ್ತವರಿಗೆ, ಜೊತೆಯವರಿಗೆ ಪ್ರಿಯರಿಗೆ ನನ್ನಿಂದ ದುಃಖವೇ ಆಯಿತು ಎಂದು ಆಗ ತಿಳಿದೆ—ಎಂದು ಗಿಳಿ ನುಡಿಯುವುದು.

೩. ಕಾದಂಬರಿಯಲ್ಲಿನ ಚಿತ್ರ ಸನ್ನಿವೇಶಗಳನ್ನು ವರ್ಣಿಸುತ್ತ ಹೋದರೆ ಮಿತಿಯೆಲ್ಲಿ? ಅವಿವೇಕವಾಗುವುದು. ಈ ಕವಿಗೆ

ಕಾಣದ ಬಣ್ಣವಿಲ್ಲ, ವಸ್ತುವಿಲ್ಲ. ಕೇಳಿಸದ ಶಬ್ದವಿಲ್ಲ. ಪ್ರೌಢಿ, ಜೀವನದರ್ಶನ, ನಯ, ಗಾಂಭೀರ್ಯ, ರಸೋತ್ಪಾದನಕೌಶಲ ಆತನಲ್ಲಿ ಯಥೇಷ್ಟವಾಗಿವೆ. ಮುದಿಗಿಳಿಯ ಸವೆದ ಕೊಕ್ಕು, ಮರಿಗಳ ತುಪ್ಪುಳು, ತೊವಲಪಂಜರ, ಬಿಸಿಲ ಜಳ, ಬೇಡ ರೊಡೆಯನ ಎದೆಮಾಟ, ಹಳದಿಕಲ್ಲ ಹಾಸು, ಕುಮಳೆ ಸಂಗೀತಕ್ಕೆ ಒಲಿವ ರೀತಿ, ಅಭಿಸಾರ, ಆತಿಥ್ಯದ ನಯ, ವೈಮಾನಿಕನ ದರ್ಪ, ಶಿವಪೂಜೆ, ತಾಂಬೂಲಪ್ರದಾನ, ಪ್ರೇಮಸೂಚನೆಗಳು, ಚೆಲುವರ ಬಗೆಬಗೆಯ ಚೆಲುವು, ಮಾನವರ ಮನಸ್ಸಿನ ಆಳ, ಭಾವವಿಲಾಸ, ವ್ಯವಹಾರ ವಿನಯ, ಭೂಸ್ವರ್ಗ ಆಕಾಶಗಳು, ಪಶುಪಕ್ಷಿ ದೇವಮಾನವರು, ಮಾಸದ ನೆನಪಾಗಿ ಉಳಿಯಬಲ್ಲ ಇಂತಹ ಚಿತ್ರಗಳು ಗ್ರಂಥದಲ್ಲಿ ತಾವೇ ತಾವು. 'ಕವಿ ತನ್ನ ಮಾಯದ ಕುಂಚವನ್ನು ಬೀಸಿದನೆಂದರೆ ಅಸಂಭವವಾದ್ದು ಸಂಭವವಾಗಿ ತೋರುವುದು. ಗಿಳಿ ಕವನ ಕಟ್ಟುವುದು . . . ಕವಿಕಲ್ಪಿತ ಪಾತ್ರಗಳು ಚರಿತ್ರೆಯ ವ್ಯಕ್ತಿಗಳಂತೆ, ನಿಜವಾಗಿ ನೋಡಿದ ಜನರಂತೆ, ಚಿರಸ್ಥಾಯಿಯಾಗಿ ವಾಚಕರ ಹೃದಯ ದಲ್ಲಿ ನೆಲೆಗೊಳ್ಳುವರು.'

೪. ಕಾದಂಬರಿ ದೇವಿಯ ಪರಿಚಯ ನಮಗಾಗುವುದು ಪುಸ್ತಕ ಸುಮಾರು ಅರ್ಧ ಮುಗಿದ ಮೇಲೆ, ಚಂದ್ರಾಪೀಡನು ಬಂದದ್ದು, ಅನುರಾಗಹುಟ್ಟಿದ್ದು, ಅಗಲಬೇಕಾಗಿಬಂದುದು, ಪ್ರಣಯದ ಒರದಿ ಮತ್ತು ಸ್ಪಷ್ಟೀಕರಣ, ಇನ್ನೇನು ಆತನನ್ನು ಕಂಡೇನು, ಆತನು ತನ್ನವನಾದಾನು ಎಂಬ ಆತುರದಿಂದ ಆಕೆ ಆಶ್ರಮಕ್ಕೆ ಬಂದಾಗ ಎದೆ ಬಿರಿದು ಆತನು ನೆಲದಲ್ಲಿ ಒರಗಿರುವು ದನ್ನು ಕಂಡದ್ದು, ಮುಂದಕ್ಕೆ ಆಶ್ರಮದಲ್ಲಿಯೇ ಉಳಿದು ಆತನ ದೇಹವನ್ನು ಕಾಪಾಡಿ ಶಾಪಮುಗಿದು ಆತನು ಬದುಕಿ

ಕೊಳ್ಳಲು ಸುಖದಲ್ಲಿ ಸೇರಿ ಬೆರೆವದ್ದು—ಇದು ಆಕೆಯ ಕಥೆ. ಮಹಾಶ್ವೇತೆ ಪುಂಡರೀಕರ ಕಥೆ ಇದಕ್ಕೆ ಒಂದು ಕೈ ಮೇಲಾಗಿಯೇ ಪ್ರಬಲಿಸುತ್ತದೆ. ಕಾದಂಬರಿಯ ಪ್ರೇಮಕ್ಕೆ ಮುಂಚೆಯೇ ಮೊದಲಿಟ್ಟು ಆಕೆಗೆ ಸುಖದೊರೆತ ಮೇಲೆ ಮುಗಿಯುವ ಅದು ಕಾದಂಬರಿಯ ಕಥೆಗೆ ಪೂರ್ವರಂಗ; ಈಕೆಯಸುಖ ದುಃಖಗಳಿಗೆ ಹಿನ್ನೆಲೆ,—ಕಾರಣ. ಅದೂ ಸಹಜವೇ. ಇಲ್ಲದಿದ್ದರೆ ಕಾದಂಬರಿಯ ಕಥೆ ಬೇರೆಯಾಗುತ್ತಿತ್ತು. ಪುಂಡರೀಕನ ಸ್ಥಿತಿ ಆ ವಿಪರೀತಕ್ಕೆ ಹೋಗದೆ ಇದ್ದಿದ್ದರೆ ಅವನು ಚಂದ್ರನಿಗೆ ಏಕೆ ಶಾಪಕೊಟ್ಟು ಸಾಯುತ್ತಿದ್ದ ? ಎಂದರೆ, ಚಂದ್ರಾಪೀಡನು ಹುಟ್ಟುವ ಅಗತ್ಯವೇ ಇರಲಿಲ್ಲವಾಗಿ ಆತನು ಮಹಾಶ್ವೇತೆಯ ಬಳಿಗೆ ಹೋಗುವುದೂ ಆಕೆ ಕಾದಂಬರಿಯ ಬಳಿಗೆ ಆತನನ್ನು ತರುವುದೂ ಕಾದಂಬರಿಗೆ ಪ್ರೀತಿ ಹುಟ್ಟುವುದೂ ಆಗದ ಸಂಗತಿಗಳು. ಹೀಗೆ ಆಕೆಯ ಪ್ರಣಯ ಚರಿತ್ರೆಗೆ ಮಹಾಶ್ವೇತೆಯ ಗತಿ ಮೂಲವಾಗುತ್ತದೆ. ಚಂದ್ರಪುಂಡರೀಕರು ಒಬ್ಬೊಬ್ಬರಿಗೆ ಶಾಪವಿಟ್ಟು ಮನುಷ್ಯರಾಗಿ ಹುಟ್ಟಿ ಬಂದ ಮೇಲೆ ಕಾದಂಬರಿದೇವಿಯ ಪ್ರಕರಣ ಮೊದಲಿಡುವುದು. ಕಥೆಯ ಒಂದು ವಿಶೇಷವೆಂದರೆ: ಮುಖ್ಯರಾದ ಗಂಡುಪಾತ್ರಗಳು ಜನ್ಮಾಂತರಕ್ಕೆ ಹೋದರೂ ಮಹಾಶ್ವೇತೆ ಕಾದಂಬರಿಯರು ಇದ್ದಂತೆ ಇರುವದು. ಪ್ರೇಮ ಫಲಿಸಲು ಕಾದಿರುವ ಅವರ ಹುಟ್ಟು, ಕುಲ, ಪ್ರಣಯ ಸಂಪತ್ತಿ, ಅವರಿಗೆ ದೊರೆತ ಭರವಸೆ ಎಲ್ಲ ಅಂಥವು. ಚಂದ್ರನಿಂದ ನಂಬಿಕೆ ಬಾರದಿದ್ದರೆ ಅವರು ಬದುಕಿರುತ್ತಿದ್ದರೋ ಇಲ್ಲವೋ ! ಚಂದ್ರನಿಗೆ ಪುಂಡರೀಕನನ್ನು ಕುರಿತು ಅಸಮಾಧಾನವಾದರೂ ಮರುಕವಿದೆ. ತನ್ನ ಕುಲದವಳಾದ ಮಹಾಶ್ವೇತೆಯ ಪ್ರೇಮಪಡೆ

ಪವನ ಶುಭಕ್ಕಾಗಿ ಆಕೆಯ ಪುಣ್ಯದಿಂದ ಕೋಪಬಿಟ್ಟು ಉಪಕಾರಮಾಡುವನು. ಯಾವಾಗ ಮಹಾಶ್ವೇತೆಗೆ ನಂಬಿಕೆ ಕೊಟ್ಟನೋ, ತನ್ನ ಅಂಶವಾದ ಚಂದ್ರಾಪೀಡನಲ್ಲಿ ಮೋಹಗೊಂಡ ಸತಿಗೂ ನಂಬಿಕೆಕೊಡುವ ಇಬ್ಬರನ್ನೂ ಕಾಪಾಡುವ ಹೊಣೆ ಆತನದಾಯಿತು.

ಈ ಬಗೆ ನೋಡಿದರೆ ಕಥೆಯಲ್ಲಿ ಕಾರ್ಯಮಾಡುವ ಪ್ರಧಾನ ಸತ್ವ ಚಂದ್ರನದು. ನೇರವಾಗಿ, ಬಳಸಾಗಿ ಈ ಪ್ರಣಯ ಸಾಮ್ರಾಜ್ಯದಲ್ಲಿ ಅವನದೆಯೆ ಕೈವಾಡ. ಕರ್ನಾಟಕ ಕಾದಂಬರಿಯಲ್ಲಂತೂ ಮೊದಲ ಪದ್ಯದಿಂದ ಹಿಡಿದು ಕೊನೆಯವರೆಗೂ ಸಂದೇಹಕ್ಕೆ ಅವಕಾಶವಿಲ್ಲದಂತೆ ಇದು ವ್ಯಕ್ತವಾಗುತ್ತದೆ. ಮಂಗಳಾಚರಣದ ಪದ್ಯ ಚಂದ್ರನಿಗೆ ವಿಲಾಸಲು. ಕವಿಗೆ ಆಶ್ರಯಕೊಟ್ಟ ರಾಜನು ಚಂದ್ರ. ಕಥೆಯ ಉದ್ದಕ್ಕೂ ಚಂದ್ರಾಪೀಡನು ನೃಪರೂಪ ಚಂದ್ರ. ರೂಪದಲ್ಲಿ ಹೇಗೆ ಚಂದ್ರನಂತೆಯೊ ನೃಪರೂಪದಲ್ಲಿ ಹುಟ್ಟಿರುವ ಚಂದ್ರನೂ ಅವನೇ ಆಗಿದ್ದಾನೆ. ಪುಂಡರೀಕನ ಕಾಮತಾಪ ಹೆಚ್ಚಲು ಆತನಿಗೆ ಬೇಗೆಯಿಟ್ಟು ಸುಡುವುದು ಚಂದ್ರಕಾಂತಿ. ಸತಿಯರಿಗೆ ಆಶ್ವಾಸನಕೊಟ್ಟು ಅದರಂತೆ ಎಲ್ಲವನ್ನೂ ನಡಸುವವನು ಚಂದ್ರನೇ. ಬೆನ್ನುಹತ್ತಿದ ಕಪಿಂಜಲನಿಗೆ ನಡೆದುದನ್ನೆಲ್ಲ ತಿಳಿಸಿ ಶ್ವೇತಕೇತುಗಳಲ್ಲಿಗೆ ಹೋಗಿ ಶಾಂತಿಕರ್ಮಮಾಡಹೇಳಿ ಕಳಿಸುವವನು ಚಂದ್ರ. ವೈಶಂಪಾಯನನಿಗೆ ಮಹಾಶ್ವೇತೆಯಲ್ಲಿ ಕಾಮಮೋಹ ಬಲಿದಿರಲು ಮನ್ಮಥ ಸಹಾಯನಾದ ಈ ಚಂದ್ರಮನೇ ಪುನಃ ಅದನ್ನು ಕೆರಳಿಸಿ ಆಕೆಯ ಶಾಪಕ್ಕೀಡುಮಾಡುವುದು. ಮುಡಿಪಾದ ತನ್ನ ಸತೀತ್ವದ ಮೇಲಾಣೆಯಿಟ್ಟು ಆಕೆ ಶಾಪಕೊಟ್ಟುದ್ದೂ ಚಂದ್ರನ ಸಾಕ್ಷಿ ಬೇಡಿಯೇ.

ಇದೂ ನ್ಯಾಯವೆ: ಚಂದ್ರಮಹಾಶ್ವೇತೆಯರೇ ಪುಂಡರೀಕನನ್ನು ಉದ್ಧಾರಮಾಡಬೇಕಾಗಿದೆ. ಅವನು ನೆರವಾಗಬೇಕು; ಇವಳು ದೊರೆಯಬೇಕು. ಇಲ್ಲವಾದರೆ ಪುಂಡರೀಕನಿಗೆ ಬದುಕಿಲ್ಲ. ಪ್ರಿಯನ ಸಾವಿಗೆ ಕಾರಣಳಾದೆ, ಬ್ರಾಹ್ಮಣ ಹನನ ಪಾತಕಿಯಾದೆ, ಮರುವುಟ್ಟಲ್ಲಿ ಕೂಡ ಬೇಡಿ ಬಂದ ಪ್ರಾಣಪ್ರಿಯನನ್ನೇ ಶಾಪವಿಟ್ಟು ಕೊಂದೆ–ಎಂದು ಆಕೆ ಎಷ್ಟೇ ತನ್ನನ್ನು ತೆಗಳಿಕೊಂಡರೂ ಈಗಿನ ದೇಹಗಳು ಕಳೆದು ಮತ್ತೊಂದು ಜನ್ಮ ಮುಗಿಯುವವರೆಗೂ ಅವರಿಗೆ ಬಿಡುಗಡೆಯಿಲ್ಲ; ಇವರಿಗೆ ಪ್ರಿಯಸಮಾಗಮವಿಲ್ಲ. ಯಾರಿಗಾಗಿ ಬಂಧನವೋ ಅವಳೇ ಕಟ್ಟನ್ನು ಒಡೆಯುವ ಸಾಧನವಾದ್ದು ಇಬ್ಬರಿಗೂ ಶುಭವೇ. ಪುಂಡರೀಕನಾಗಿ ಮರಳಿ ಬದುಕಿ ಬಂದ ಹೊರತು ತನ್ನ ಒಲವಿಗೆ ಸಿದ್ಧಿಯಿಲ್ಲ. ಅದಕ್ಕಾಗಿಯೇ ಆಕೆಯ ತಪಸ್ಸು. ಆ ತಪಸ್ಸು ಸಿದ್ಧಿಸುವುದರಲ್ಲಿ ಸಂದೇಹವಿಲ್ಲ. (ಕಪಿಂಜಲನೂ ಆ ರೀತಿ ವಿಶ್ವಾಸಕೊಟ್ಟು ಹೋಗಿದ್ದಾನೆ). ಇತ್ತ ಶಾಪದಿಂದ ಚಂದ್ರಾಪೀಡನಿಗೂ ಬಿಡುಗಡೆ ಬರಬೇಕು. ಅದರ ಹೊರತು ಗೆಳತಿ ಕಾದಂಬರಿಗೆ ಸುಖವಿಲ್ಲ. ಆದ್ದರಿಂದಲೇ ಅವರಿಬ್ಬರಿಗೂ ಉಪಾಯ ಒಂದೇ. ವಿಧಿಯ ಪ್ರಭಾವಕ್ಕೆ ಸಿಕ್ಕಿಕೊಂಡು ಬಳಲುವ ತಂಗಿ ಕಾದಂಬರಿಯ ಪ್ರೀತಿಯನ್ನು ಹಣ್ಣುಮಾಡಿಸುವುದೂ ಮಹಾಶ್ವೇತೆಯ ಪಾಲಿಗೇ ಬೀಳುತ್ತದೆ. ಆಕೆಯಂಥ ಸತ್ವಕ್ಕೂ ನಿಷ್ಠೆಗೂ ಅಸಾಧ್ಯವಾದುದಿಲ್ಲವೆಂಬಂತೆ ಆಕೆಯ ಉದಾರಚರಿತೆ ಚಿತ್ರಿತವಾಗಿದೆ.

೫. ಎರಡು ಜೊತೆ ಪಾತ್ರಗಳಲ್ಲಿಯೂ ಸಾಮ್ಯ ಎಷ್ಟಿದೆಯೊ ಅಸಾಮ್ಯ ಅಷ್ಟಿದೆ. ಹೊರ ಲಕ್ಷಣಗಳನ್ನು ನೋಡಿದರೆ ಎಲ್ಲ ದೇವಲೋಕಕ್ಕೆ ಸೇರಿದವರು, ಅಥವಾ ಸೇರಬೇಕಾದವರು.

ಅವರ ಪ್ರೇಮಕಥೆಯೂ ಗತಿಯೂ ಸುಮಾರು ಒಂದೇ ಕ್ರಮ ದಲ್ಲಿ ಬೆಳೆವವು: ಕಾಣುವುದು, ಕಂಡೊಡನೆ ಪ್ರೀತಿ, ಅಗಲಿಕೆ, ನೋವು, ಗಂಡಿನ ಸಾವು, ಎರಡು ಹುಟ್ಟು ಇವರಿಗೆ ಕಳೆದ ಮೇಲೆ ಪ್ರಿಯರು ಕೂಡುವುದು. ಹುಟ್ಟಲ್ಲಿ ಹೇಗೆಯೊ ಅದೃಷ್ಟ ದಲ್ಲಿಯೂ ಹಾಗೆಯೇ ಮಹಾಶ್ವೇತೆ ಕಾದಂಬರಿಯರು ಗೆಳತಿ ಯರು. ಕವಿ ಇದನ್ನೆಲ್ಲ ವರ್ಣಿಸುವುದು ಒಟ್ಟು ಒಂದೇ ರೀತಿಯಲ್ಲಿ.

ಇನ್ನು ಅಸಾಮ್ಯದ ಅಂಶಗಳನ್ನು ನೋಡೋಣ: ಪುಂಡ ರೀಕ ಋಷಿಯ ಮಗ. ತಂದೆಯನ್ನು ಲಕ್ಷ್ಮಿ ಮೋಹಿಸಿದಂತೆ ಮಹಾಶ್ವೇತೆ ಇವನನ್ನು ಮೋಹಿಸಿದಳು. ಆದರೆ ಇಲ್ಲಿ ಇವನು ಅತ್ಯನುರಕ್ತ. ತಾಯದು ಚಪಲವಾದರೆ ಇವನದು ತೀವ್ರತರ; ಕೆಣಕಿ ವಿಧಿಯನ್ನೇ ತಲೆಯ ಮೇಲೆ ತಂದು ಕೊಂಡದ್ದು. ಹುಟ್ಟುತ್ತ ಬಂದ ಅಲ್ಪಾಯುವನ್ನು ನಿವಾರಿಸಲು ತಂದೆ ಹೋಮಾದಿಗಳನ್ನು ಮಾಡಲಿಲ್ಲ. ಎರಡನೆಯ ಹುಟ್ಟಿ ನಲ್ಲಿ ಮಗನ ಅವಿನಯವನ್ನು ಕಂಡ ಶುಕನಾಸನು ವೈಶಂಪಾಯ ನನ್ನು ಗಿಳಿಯಾಗೆಂದು ಶಪಿಸಿದ.

ಮಹಾಶ್ವೇತೆ ತಪಸ್ವಿನಿ. ಅಲೌಕಿಕ ದೃಢತೆ, ಮಹೋನ್ನತಿ ಇವೆ ಆಕೆಯಲ್ಲಿ. ಹಿರಿಯ ಹೆಂಗಸೆಂಬ ನಾಡಾಡಿ ಕಲ್ಪನೆ ಆಕೆಗೆ ಸಾಲುವುದಿಲ್ಲ. ಇತ್ತ ಪ್ರಿಯನಿಷ್ಠೆಯಾಗಿ, ಸುಕುಮಾರಿಯಾಗಿ, ಗುಣಗಳ ನೆಲೆಯಾಗಿ ಕಾದಂಬರಿಯೂ ಇದ್ದಾಳೆ. ಆದರೂ ಈಕೆ ತಂಗಿ, ಮಹಾಶ್ವೇತೆ ಅಕ್ಕ. ಅಕ್ಕನ ಗತಿಯನ್ನು ತಂಗಿ ಅನುಸರಿಸಲು ಅಥವಾ ಆ ಗತಿಯಲ್ಲಿ ತನ್ನನ್ನು ತೇಲಿ ಬಿಡಲು ಹೋಗಿ ಅರಿಯದಂತೆ ಅದರ ಸುಳಿಯಲ್ಲಿ ಸಿಕ್ಕಿಕೊಳ್ಳುವ ಅಬಲೆ ಕಾದಂಬರಿ. ಹಿರಿಯ ಗ್ರಹವನ್ನು ಉಪಗ್ರಹ ಅನುಸರಿ

ಸುವಂತೆ ಆಗುವುದು ಆಕೆಯ ಗತಿ. ವನಾಂತರ, ಸರೋವರಗಳ ಎಡೆಯಲ್ಲಿ–ಪ್ರಕೃತಿಯ ತೆರೆದ ಮಹಾವರಣದಲ್ಲಿ ಹುಟ್ಟಿ, ಆಶ್ರಮ, ವ್ರತ, ಭಕ್ತಿ, ವೈರಾಗ್ಯಗಳಲ್ಲಿ ಎಡೆವೂರಿ ಬೆಳೆದ ಪ್ರೇಮಶಕ್ತಿ ಮಹಾಶ್ವೇತೆಯದಾದರೆ ಕಾದಂಬರಿಯ ಪ್ರೇಮ ಲೌಕಿಕಕ್ಕೆ ಸಲ್ಲುವ ಚೆಲುವಿನದು, ಬೆಳಸಿನದು. ಅರಮನೆ, ಕ್ರೀಡಾಶೈಲ, ಉಪವನ, ಹಿಮಗೃಹಗಳಲ್ಲಿ ಅದರ ಸಂಚಾರ. ಮೃದು ಊಳಿಗ, ಭೋಗ, ಐಶ್ವರ್ಯ, ಕಲೆ, ಕ್ರಿಡಾಕರ್ಮ ಶೈತ್ಯೋಪಚಾರ, ಕಳಶ, ಕನ್ನಡಿ, ವೀಳೆಯ, ತಾಂಬೂಲರಾಗ, ಸುಗಂಧ, ತಾವರೆಯೆಲೆ, ಶಿಲಾಪಟ್ಟ, ಮಾಲತೀಕುಸುಮ ಮಾಲೆ, ಸುಯ್ಯೆಲರಿಂ ಪಾರಿದಪವು ಎನಿಪ ದುಕೂಲಗಳು, ಮುತ್ತಿನಸರ, ಛತ್ರ, ಚಾಮರ, ದಿಂಬು, ಹಂಸತೂಲಿಕಾಕಲ್ಪ, ವೀಣಾವೇಣುವಾದನ, ಭಾರತಪಠನ ಇವುಗಳು ತುಂಬಿದ ಚೆಲುವಿನ ಒಳಲೋಕ.* ಇಲ್ಲಿ ಎಲ್ಲವೂ ಲಲಿತ, ಕೋಮಲ, ಮಧುರ. ಎರಡರ ಪರಮಾವಧಿ ಸೌಭಾಗ್ಯವೂ ದೊರಕುವುದಾದರೂ ಮಹಾಶ್ವೇತೆಯದು ಧೀರಮೂರ್ತಿ; ಕಾದಂಬರಿಯದು ಕೋಮಲಾಂಗನೆಯ ಅಂತಃಕರಣ.

---

* ಈಕೆ ಮದನವೇದನೆಯ ಅಭಿಜ್ಞಾನಗಳನ್ನು ಕಳಿಸಿದ ಪರಿಯನ್ನು ನೋಡಿ:

ಪಸುರ್ಗೆಸೆವ ಪಾಲಡಕೆಯ ಗೊಂಚಲು; ಖಚರಕಾಮಿನಿಯರ ಕದಂಪಿನ ಬೆಳ್ಪನ್ನು ಅಪ್ಪುಕಯ್ದ ಕಪ್ಪುರವಳ್ಳಿಯ ಬಿಳಿಯೆಲೆಯ ವೀಳೆಯ; ಎಳ ಪೆರೆಯ ಮುರಿಗಳನ್ನು ಏಳಿಸುವ ಕಪ್ಪುರದ ಪೆಳಕುಗಳು; ಕತ್ತುರಿಯ ಕಂಪಿಂದ ಸೊಂಪುತಳೆದ ಮಲಯಜವಿಲೇಪ —

ಇವನ್ನು ತಾವರೆಯ ನೂಲಿಂದ ಸುತ್ತಿದ್ದಾರೆ; ಸಿರಿಕಂಡದ ಉರುಳಿಯನ್ನು ಹತ್ತಿಸಿದ್ದಾರೆ; ಮೃಣಾಳನಾಳ ವಲಯದಿಂದ ಮುದ್ರಿಸಿ ನಳಿನೀಪತ್ರಪುಟದಲ್ಲಿ ಇಟ್ಟಿದ್ದಾರೆ.

ಅದರ ಮೇಲೆ ಇರ್ಪು ಪೊರೆದ ದುಗುಲದ ಬಾಸಣಿಗೆ ಇದೆ!

ಇನ್ನೊಂದು ವಿಶೇಷ. ಆಶ್ರಮದಲ್ಲಿ ಕಾದಂಬರಿಯೆದುರಿಗೆ ಅಚೇತನವಾದರೂ ಚಂದ್ರಾಪೀಡನ ದೇಹವಿದೆ. ಚಂದನಪುಷ್ಪಾದಿಗಳಿಂದ ಅರ್ಚಿಸಿ ಕಾಪಾಡುತ್ತಿರಲು ಅದಕ್ಕೆ ಕ್ರಮಕ್ರಮವಾಗಿ ಜೀವಕಳೆ ಏರುವುದು ಕಣ್ಣಮುಂದಿನ ನೋಟ. ಮಹಾಶ್ವೇತೆಯ ಪ್ರಿಯನೋ – ಎದುರಿಗಿಲ್ಲ. ಬೇರೆ ಲೋಕಕ್ಕೆ ಒಯ್ದಿದ್ದಾರೆ. ನಿಜವೋ ಸುಳ್ಳೋ ಆತನು ಬದುಕಿ ಬರುವುದು? ವೈಶಂಪಾಯನ ಪ್ರಸಂಗದಲ್ಲಿ ಆಕೆಯ ಸತ್ವ ಪುನಃ ಪರೀಕ್ಷೆಗೆ ಬರುವುದು ಬೇರೆ.

ಹೀಗೆ ಇವರ ಜೊತೆ ಚಿತ್ರಗಳು ಎರಡು ಬಗೆಯ ಸೋದರ ಪ್ರಪಂಚಗಳು. ಚಂದ್ರಾಪೀಡ ಪುಂಡರೀಕರ ಗುಣವೃತ್ತಿಶೀಲಗಳಲ್ಲಿಯೂ ಹೀಗೆಯೆ ಹೋಲಿಕೆ ವ್ಯತ್ಯಾಸ ಕಾಣುತ್ತವೆ. ಪತ್ರಲೇಖೆ ಕಪಿಂಜಲರು ಸಲ್ಲಿಸುವ ಕೆಳೆತನದ ಸೇವೆಯನ್ನೂ ಸಾಮ್ಯದಲ್ಲಿ ತೋರಿಸಬಹುದು.

೬. **ಮಹಾಶ್ವೇತೆ**–ಮಹಾಶ್ವೇತೆ ಇರುವುದು ಸಿದ್ಧಾಯತನದಲ್ಲಿ; ವ್ರತಚರ್ಯೆಯಲ್ಲಿ; ದಕ್ಷಿಣಾಮೂರ್ತಿಯನ್ನು ಆಶ್ರಯಿಸಿದ ಭಕ್ತಿಯಲ್ಲಿ; ಪುಂಡರೀಕಮಾಲೆಗಳಿಂದ ಎಂಬಂತೆ ಶಿವನನ್ನು ಕಣ್ಣಟ್ಟು ಅರ್ಚಿಸುತ್ತ ಇರುವಾಗ. ಚಂದ್ರಾಪೀಡನೂ ನಾವೂ ಆಕೆಯನ್ನು ಕಾಣುವಹೊತ್ತಿಗೆ ಆಕೆಯ ಸಂತೋಷದ ಕಾಲ ಮುಗಿದುಹೋಗಿರುತ್ತದೆ.

ಈ ಕಾವ್ಯದ ಎಲ್ಲ ಮಕ್ಕಳಂತೆ ಮನೆಗೆ ಒಬ್ಬಳೇ ಮಗಳಾಗಿ ಹುಟ್ಟಿದವಳು. ಆರೈಕೆಯಲ್ಲಿ ಬೆಳೆದವಳು. ಆಕೆಯ ಮನಶ್ಶಕ್ತಿ ವಿಲಕ್ಷಣವಾದುದು. ಸ್ವಂತ ತಂದೆತಾಯಿಯರಿಗೂ ಚಿತ್ರರಥಾದಿಗಳಿಗೂ ಆಕೆಯನ್ನು ಕಂಡರೆ ಗೌರವ. ಯಾರೂ ಆಕೆಯ ಮಾತನ್ನು ತೆಗೆದುಹಾಕರು. ಕುಲ, ವಿದ್ಯೆ, ಶೀಲಗಳ ಬೆಲೆ ಆಕೆಗೆ ತಿಳಿದಿದೆ. ಲೋಕಮರ್ಯಾದೆ ಗೊತ್ತು. ಹಿರಿಕಿರಿಯ

ಕೊಡನೆ, ಊಳಿಗದವರೊಡನೆ, ಆಗಂತುಕರೊಡನೆ ತಕ್ಕಂತೆ ನಡೆಯಲು ಅರಿತವಳು. ಎಳೆಯ ವಯಸ್ಸಾದರೂ ಅಂಕುಶವಿಲ್ಲದೆ ಬೆಳೆದವಳಾದರೂ ಪ್ರೇಮದ ತೊಳಲಿಗೆ ಈಡಾದಾಗ ತನ್ನನ್ನು ನಿಯಾಮಿಸಿಕೊಳ್ಳಲು ಬಲ್ಲವಳು. ವಿಧಿಸೂತ್ರಕ್ಕೆ ಎರಡು ಜೀವ ಕಟ್ಟಬಿದ್ದು ತಮ್ಮ ಶಕ್ತಿಗೆ ಮಿೀರಿದ ಸೆಳೆತಕ್ಕೆ ಸಿಕ್ಕಿಕೊಂಡದ್ದರಿಂದ ಇವಳ ಬಾಳಿಗೆ ನೋವು ಬಂತು. ಕುಗ್ಗಿ ನಿರ್ಬಲಳಾದಳೇನು? ಆ ಭರದಲ್ಲಿ ಇನಿಯನೊಡನೆ ಸಲ್ಲಬೇಕೆಂದು ಯೋಚನೆಯೇನೋ ತೀವ್ರವಾಗಿ ಉಂಟಾಯಿತು. ಆದರೆ ಆಸೆಗೂ ಚಂದ್ರತರಳಿಕೆಯರ ಆಶ್ವಾಸನಕ್ಕೂ ಕಿವಿಗೊಟ್ಟಳು. ಚಂದ್ರನಂತಹವರ ನುಡಿ ಬಂಜೆಯಾಗದೆಂದು ಗೆಳತಿ ಹೇಳಿದುದು ಯುಕ್ತವಾಗಿ ಕಂಡಿತು. ತಡೆದಳು. ಇಷ್ಟಾದ ಮೇಲೆ ಮನೆಗೂ ಲೋಕಸುಖಕ್ಕೂ ಮನಸ್ಸು ಮರಳಿ ಒಲಿಯಲಿಲ್ಲ. ಅದನ್ನು ಬೇರೆಗೆ ತೆತ್ತಾಗಿದೆ. ಲಜ್ಜೆಯೇನುಬಂತು? ಬದುಕು ಋಷಿಕುಮಾರನ ಒಡವೆ. ಇನ್ನೇಕೆ ಅರಮನೆ, ತಂದೆ, ತಾಯಿ, ಊಳಿಗದವರು, ಸುಖ? ಆದ್ದರಿಂದಲೇ ತಂದೆಯ ಬೋಧೆ, ತಾಯ ಕಂಬನಿ, ಇಬ್ಬರ ಬೇಡಿಕೆ, ಯಾವುವೂ ಆಕೆಯನ್ನು ತಿರುಗಿಸಲಿಲ್ಲ. ಪದಾರ್ಥ ಅನಿತ್ಯ; ಸಂಸಾರ ನಿಸ್ಸಾರ; ದೈವ ನಿಷ್ಠುರ, ತನ್ನದು ಮಂದಪುಣ್ಯ; ಬಂದ ವ್ಯಸನ ಪ್ರತೀಕಾರವಿಲ್ಲದ್ದು; ಸ್ನೇಹ ಬಹುಲವಾದ ದುಃಖತರತಕ್ಕದ್ದು ಎಂದು ತಿಳಿದು

ಮನಮಂ ನಿಗ್ರಹಿಸುತ್ತ, ಅಸದ್ವಿಷಯದತ್ತಲ್ ಪೋರ್ದದಂತಾಗೆ ಮಾಡಿ, ನಿರುದ್ಧೇಂದ್ರಿಯೆಯಾಗಿ, ಬಂಧುಜನಮಂ ತಾಯ್ತಂದೆಯುಂ ಪತ್ತುವಿಟ್ಟಿನಗಿನ್ನೇವರ್ದಪಂ ಪಿರ್ವರ್- ಎಂಬ ಬಗೆಯುಂ ನಿಶ್ಚೈಸಿ, ಲೋಕೈಕನಾಥನನ್-ಆಗಳ್-ಅನಾಥೆಯೆಂ ಶರಣೆನುತ್ತ ಆಶ್ರೈಸಿದೆಂ ಸ್ಥಾಣುವಂ

ಹೀಗಾಗಿಯೇ ಚಂದ್ರಾಪೀಡನು ಮೊದಲು ಕಂಡಾಗ 'ಅಮಥಿತ ಉದಧಿ ಜಲಸಂಪದಮಿವ ಅಂತಃ ಪ್ರಸನ್ನಾಂ' ಆಗಿ ಆಕೆ ಕಾಣಿಸಿದ್ದು. ಈ ಧೈರ್ಯ, ತಾಳ್ಮೆ ಸ್ವಲ್ಪವಾದರೂ ಪುಂಡರೀಕನಿಗಿದ್ದಿದ್ದರೆ ಅವನ ಪಾಡು ಅಷ್ಟು ದೀನವಾಗಬೇಕಾಗಿರಲಿಲ್ಲ; ಅವನು ಸಾಯಬೇಕಾಗಿರಲಿಲ್ಲ. ಇಬ್ಬರಿಗೆ ಸಾಯುವಷ್ಟು ಸಂಯಮ ಆಕೆ ಒಬ್ಬಳಲ್ಲಿ ಇದ್ದುದರಿಂದಲೇ ಆಕೆಯ ವರ್ಚಸ್ಸು ಭವ್ಯವಾಯಿತು. ಒಂದು ಗಂಟೆಗೆ ಕಡಮೆಯ ಕಾಲಾವಕಾಶದಲ್ಲಿ ಹುಟ್ಟಿದ ಪ್ರೇಮ ಹಣ್ಣಾಗಿ ಸಾವಿಲ್ಲದ ಸತ್ವವಾಯಿತು. ಆಕೆಯನ್ನು ಕೀರ್ತಿಗೂ ಕಾಂತಿಗೂ ಎತ್ತಿತು; ಪ್ರಿಯನನ್ನು ಉದ್ಧಾರಮಾಡಿತು.

ಆಕೆಯ ಸಂತತ ಧ್ಯಾನ ಪುಂಡರೀಕನನ್ನು ಕುರಿತದ್ದು. ನೋವಿರಲಿ, ಸಾವುಬರಲಿ ಒಲವೆಲ್ಲ ಆತನಿಗೆ ಮುಡಿಪು. ಕಾಮಾತುರದಿಂದ ಅವನು ತೀರಿಕೊಳ್ಳಲು ತಾನೇ ಅದಕ್ಕೆ ಕಾರಣಳಾದೆನಲ್ಲ ಎಂಬ ಬೇಗೆಯೂ ಆಕೆಯನ್ನು ತಾಪಸಿಯಾಗಿ ಮಾಡಿತು. ಅದೇ ಕಾಮವೃತ್ತಿಯಿಂದ ಉನ್ಮತ್ತನಂತೆ ವೈಶಂಪಾಯನನು ಆಕೆಯ ಬಳಿಗೆ ಬರುತ್ತಿದ್ದಾಗ ಆಕೆ ಎಣಿಸುತ್ತಿದ್ದುದು ಪುಂಡರೀಕನನ್ನೇ. ಅವನ ವಾರ್ತೆಯನ್ನು ತಾರದೆ ತಡೆದಿರುವ ಕಪಿಂಜಲನನ್ನೇ. ಪುಂಡರೀಕನೊಡನೆ ಸೇರುವೆಯೆಂದು ಹೇಳಿ ಹೋಗಿದ್ದ ಚಂದ್ರನ ವಾಣಿಯನ್ನೇ. ವೈಶಂಪಾಯನನೇ ಪುಂಡರೀಕನೆಂದು ಅರಿಯಳು. ಈ ಸನ್ನಿವೇಶವಲ್ಲಿ ನಟ್ಟ ವಿಷಮತೆ ದುರಂತವಾದದ್ದು. ಸಂಸ್ಕಾರವಶದಿಂದ ಅವನಿಗೆ ಉಂಟಾದ ನೆನಪು, ಮಂಕು, ಮಂಪರ ಆಕೆಗೂ ಉಂಟಾಗಿ ಸಹಾನುಭೂತಿ ಬರಬಾರದಿತ್ತೆ ಎಂದು ಕೇಳುವವರಿಗೆ ಮಹಾಶ್ವೇತೆಯ ನಿಷ್ಠೆ ಅರ್ಥವಾಗುವುದಿಲ್ಲವೆನ್ನಬೇಕು. ಕಾಮ

ವೇಗ ತಡೆಯಲಾರದೆ ಮರಳಿ ಮರಳಿ ಸತ್ತು ಹುಟ್ಟುತ್ತಿರುವನು ಅವನು. ಅದು ಪ್ರೇಮವಾಗಿ ಆಕೆಗೆ ತಕ್ಕುದಾಗಬೇಕಾದರೆ ಪುಂಡರೀಕನೇ ಚೊಕ್ಕ ಬಂಗಾರವಾಗಿ ಬದುಕಿ ಆಕೆಯಲ್ಲಿಗೆ ಬರಬೇಕಾಗಿದೆ. ಹಾಗಾದರೆ ಮಾತ್ರ ಆಕೆಯ ಒಲವಿಗೆ ಸಫಲತೆ. ವೈಶಂಪಾಯನ ಶರೀರದಲ್ಲಿ ಪುಂಡರೀಕನು ಪರಪುರುಷ. ಆದ್ದರಿಂದಲೇ ಅವನಾರು, ಎತ್ತಲಿಂದ ಬಂದವನು, ಏನು ಕೇಳುತ್ತಿರುವನು ಎಂಬುದು ಬೇಕಾಗದೆ ಮೌನದಿಂದ ಆಕೆ ಒಂದು ದೆಸೆಗೆ ತೊಲಗಿದುದು. ಆಕೆಗೆ ಕೌತುಕ ಉಳಿದಿರಲಿಲ್ಲ. ಸುಖದ ನುಡಿಬೇಕಿರಲಿಲ್ಲ. ಆದ್ದರಿಂದಲೇ ಆಕೆ ಭಯಗೊಂಡು,

ಎಲೆ, ಕೇಡಾಯ್ತೆನಗೋವೊ, ಮತ್ತಂ ಇವನೆನ್ನಂ ಕಯ್ಯೊಳಂ ಬಂದು ಮುಟ್ಟಲೊಡಂ ಪತ್ತುವಿಡಲ್ಕೆ ವೇಳ್ಕುಂ ಅಸುವಂ ; ಮೆಯ್ಯೊಡ್ಡಿದೆಂ ದುಃಖಸಂಕುಲಕೆ ಓರಂತಿರೆ ; ಪುಂಡರೀಕನನೆ ಮತ್ತಂ ಕಾಣ್ಬೆನೆಂಬ್-ಎಂದೆ ; ನಿಷ್ಫಲಮಾಯ್ತಕ್ಕಟಾ ಮಂದಭಾಗ್ಯೆಗೆನಗೆ—ಈ ಪ್ರಾಣಸಂಧಾರಣಂ.

ಎನ್ನುವಳು. ಅವನ ನುಡಿ ಸತಿ ಕೇಳಲಾಗದುದು. ಕೇಳಿದೊಡನೆ ' ನೆತ್ತಿಯಲ್ಲಿ ಉರಿಮಸಗಿದಂತಾಯಿತು; ಕಿನಿಸು ಕೈಗಣ್ಮಿತು. ಕಣ್ಗಳಿಂದ ಉಗುತರುವ ಕಂಬನಿ ಕಿಡಿಗಳಿಂದ ಉರಿಸುವಂತೆ ಅವನನ್ನು ನೋಡುತ್ತ ಆವಿಷ್ಟೆಯಂತೆ ತನ್ನನ್ನು ತಾನರಿಯದೆ

ನುಡಿವನ್ನಂ-ಎನ್ನ ನೀಪರಿ
ಸಿಡಿಲೇತಕೆ ಕೆಡೆದುದಿಲ್ಲ ನಿನ್ನಯ ಸಿರದೊಳ್,
ಉಡುಗಿದುದಿಲ್ಲಂ-ಉಸಿರ್ ? ನೂ
'ರ್ಮಡಿಯೆನಲ್-ಈಜಿಹ್ವೆ ಬಿರಿದುದಿಲ್ಲ, ದುರಾತ್ಮ-

ಎಂದು ಚಂದ್ರಾಭಿಮುಖಿಯಾಗಿ ಕಯ್ಗಳನ್ನು ಮುಗಿದು ' ಮಹಾ

ಭಾಗ, ಸಕಲಭುವನಚೂಡಾಮಣಿಯಪ್ಪ ರೋಹಿಣೀರಮಣ, ಪುಂಡರೀಕನ ನಾಂ ನೋಡಿದಂದಿನಿಂ ಮತ್ತೊರ್ವ ಪುರುಷನಂ ಮನದೊಳಾದೊಡಂ ಭಾವಿಸದಿರ್ದುದು ನನ್ನಿಯಪ್ಪೊಡೆ ಈ ಅಳೀಕಕಾಮಿ ಗಿಳಿಯಾಗಿ ಪುಟ್ಟುಗೆ ' ಎನ್ನುವಳು. ಪುಂಡರೀಕನು ಬೇಟವ ಆರ್ಯೆಯನ್ನು ಕಳಿಸಿದ್ದ; ಅವನಿಗಾಗಿ ಕಪಿಂಜಲನು ಬಂದು ಪ್ರಣಯಭಿಕ್ಷೆಬೇಡಿದ್ದ. ಈ ಹುಟ್ಟಿನಲ್ಲಿ ತಾನೆಯೇ

ಪಲುಂಬಿ ಮರೆವೊಕ್ಕೆ ನಾಂ ನಿನಗಧೀನಂ-ಈಜೀವಿತಂ
ವಿಲಂಬಿಸದೆ ರಕ್ಷಿಸೆನ್ನ ನ್-ಆರಿಯೆಂ ಪ್ರತೀಕಾರಮಂ

ಎಂದು ಬೇಡುವನು. ಕುಂದವೆ ಅಡಗದೆ ನಡೆದಿದೆ ಈ ಬೇಟ ಜನ್ಮಜನ್ಮಾಂತರಗಳಲ್ಲಿ. ಆದರೆ ಬೇಟ ಕೈಗೂಡುವ ಕಾಲ ಇನ್ನೂ ಬಂದಿಲ್ಲ.

ತನ್ನ ಕಷ್ಟ ಗೆಳತಿಗೇಕೆ ಹರಡಬೇಕು? ತಂಗಿಯ ತೀರ್ಮಾನಕ್ಕೆ ತಾನೇ ಕಾರಣವಾದ್ದರಿಂದ ಆಕೆಯನ್ನು ತಿರುಗಿಸುವ ಭಾರವೂ ಮಹಾಶ್ವೇತೆಯ ಮೇಲೆ ಬಿತ್ತು. ಚಿತ್ರರಥನೂ ಮೊರೆಯಿಟ್ಟ. ಆದ್ದರಿಂದ ತಾನೇ ಹೋದಳು. ಚಂದ್ರಾಪೀಡನಿಂದ ಬುದ್ಧಿ ಹೇಳಿಸಿಯೂ ನೋಡಬೇಕೆಂದು ಚಪಲ. ಇವನನ್ನು ಕಂಡು ಆಕೆಯ ತೀರ್ಮಾನ ತಿರುಗೀತು ಎಂದು ಆಸೆ. ಅವರು ಸೋತಿರಲು ತನ್ನ ನಿಯೋಗ ಹಣ್ಣಾಯಿತೆಂದು ತೃಪ್ತಿ. ತಂಗಿಯ ಸುಖವನ್ನು ಹೇಗೆ ಅಕ್ಕನು ಸಾಧಿಸಬೇಕೊ ಹಾಗೆ ಸಾಧಿಸಲು ಪ್ರಯತ್ನಿಸುವಳು. ಅದಕ್ಕೆ ಅಡ್ಡಿ, ಆತಂಕ ಬಂದರೆ ಪರಿತಪಿಸುವಳು. ತನಗೆ ದುಃಖವಿರುವಾಗ ಈಗೊಡವೆ ತನಗೇಕೆಂದು ಹಿಂಜರಿವ ಸ್ವಾರ್ಥವಲ್ಲ, ಆಕೆಯದು.

ತನ್ನ ಕಥೆಯನ್ನು ಕೇಳಲು ಕುತೂಹಲ ತೋರಿದ ಚಂದ್ರಾ,

ಪೀಡನ ಸೌಜನ್ಯವನ್ನು ಕಂಡು ಹೇಗೆ ಪಕ್ಷಪಾತವುಂಟಾಯಿ ತೆಂಬುದರಿಂದಲೂ ಋಷಿಕುಮಾರರೊಡನೆ ಹೇಗೆ ನಡೆದು ಕೊಂಡಳೆಂಬುದರಿಂದಲೂ ಆಕೆಯ ಮನಸ್ಸಿನ ಸರಳತೆಯೂ ಧಾರಾಳವೂ ಗೊತ್ತಾಗುತ್ತದೆ. ಕಥೆಯನ್ನು ಸಂಕೋಚವಿಲ್ಲದೆ ಹೇಳುತ್ತಾಳೆ. ಕಾದಂಬರಿಗೆ ಆತನ ಪರಿಚಯಮಾಡಿಕೊಡುವು ದರಲ್ಲಿ ಕೂಡ ಈ ಸಹಜ ಸರಳತೆ ಕಾಣುತ್ತದೆ. ಎದೆತುಂಬ ಪ್ರೀತಿ, ನಡೆತುಂಬ ಗಾಂಭೀರ್ಯ, ಸ್ನೇಹ. ಎಲ್ಲಿಹೋದರೂ ಆಕೆಗೆ ಗೌರವವೇ. ಎಲ್ಲರೂ ಆಕೆಯ ಕಣ್ಣುಸನ್ನೆಗೆ ಕಾದು ನಡೆಯುವವರೇ. ಕಾದಂಬರಿಗೆ ಪರಿಚಯಮಾಡಿಕೊಟ್ಟಂತೆಯೇ ಬೀಳ್ಕೊಳ್ಳಲು ಒಪ್ಪಿಗೆಕೊಡಿಸುವವಳೂ ಅವಳೇ. ಪುನಃ ಕರಸಿ ತೋರಿಸಿ ಸ್ಥಿತಿ ಕಾಣಿಸಿದಮೇಲೂ ಆತನು ಉಜ್ಜಯಿನಿಗೆ ಹಿಂದಿರುಗಿದನೆಂದು ಕೇಳಿದಾಗ ವಿಷಾದಪಟ್ಟು 'ಇಂತುಟೆವಲಂ' ಎಂದು ವ್ಯಥೆಪಡುವವಳೂ ಆಕೆಯೇ.

ಇಂತಹ ಚಾರಿತ್ರ ಸುತ್ತಲ ಪರಿಪರಿವಾರಕ್ಕೂ ಹಬ್ಬುವುದ ರಲ್ಲಿ ಆಶ್ಚರ್ಯವೇನು? ಅವರು ಇಂಗಿತಜ್ಞರು, ಅನುಕಂಪೆ ಯವರು, ಸಜ್ಜನರು, ಜಾಣ್ನುಡಿಯವರು. ತರಳಿಕೆ, ಕೊಡೆ ಯವಳು ಎಲ್ಲರೂ ಹೀಗೆಯೆ. ಎಳವೆಯೊಳೇ ಗಾಂಭೀರ್ಯ ವನ್ನೊಳಕೊಂಡು ನಯಸಂಪನ್ನರಾದ, ಉಪಕಾರಕ್ಕೆ ಆತುರ ರಾದ ಜನ.

ಮಹಾಶ್ವೇತೆಯನ್ನು ಕಂಡರೆ ಚಂದ್ರಾಪೀಡನಿಗೆ ಉಂಟಾ ದಂತೆ ನಮಗೂ ಗುರುತ್ವ, ಪೂಜ್ಯಭಾವ ಉಂಟಾಗುವುದು. ಸಾವಿತ್ರಿ, ಸೀತೆ, ಬಿಯಾಟ್ರಿಚ್, ದಿ ಬ್ಲೆಸ್ಸೆಡ್ ಡ್ಯಾಮೊಸೆಲ್ ಮುಂತಾದ ಸಾಧ್ವಿಯರ ಸಾಲಿನ ಪ್ರೇಮಮೂರ್ತಿ, ಮಹಾ ಸತಿ ಆಕೆ.

೭. **ಕಾದಂಬರಿ**—ಗಂಧರ್ವ ರಾಜಪುತ್ರಿಯಾಗಿ ಎಲ್ಲ ಭೋಗಕ್ಕೆ ಒಡತಿಯಾಗಿದ್ದರೂ ಮಹಾಶ್ವೇತೆಯ ವಿರಕ್ತಿಯನ್ನು ಕೇಳಿ ತಾನೂ ಕನ್ಯಾವ್ರತದಲ್ಲಿ ಕಾಲಕಳೆಯುವೆನೆಂದು ತೀರ್ಮಾನಿಸುವುದು ಸಾಮಾನ್ಯವಲ್ಲ. ತಿಳಿವಳಿಕೆ, ನಯ, ನಾಜೂಕುಗಳಲ್ಲಿಯಾಗಲಿ ಗಾಂಭೀರ್ಯದಲ್ಲಿಯಾಗಲಿ ಕೋಮಲತೆಯಲ್ಲಾಗಲಿ ಆಕೆಯ ಯೋಗ್ಯತೆ ಹಿರಿದು. ಪ್ರೇಮಕ್ಕೆ ಹೃದಯ ತೆರೆದ ಕೂಡಲೆ ಬಲಿ ದಾನಮಾಡಿಕೊಳ್ಳುವ ಭಕ್ತಿ ಆಕೆಯದು. ಕಾದಂಬರಿ ಮಹಾಶ್ವೇತೆಯರು ರೂಪು ಕಂಡೊಡನೆ ತಮ್ಮನ್ನು ತೆತ್ತುಕೊಂಡರಾದರೂ ಇವರ ಪ್ರೇಮಗಳನ್ನು ಕವಿ ಎರಡು ಬಗೆಯ ಬಣ್ಣ ಬೆಳಕು ಕುಂಚಗಳಿಂದ ಚಿತ್ರಿಸುತ್ತಾನೆ. ಪ್ರೇಮಕ್ಕಾಗಿ ಒಬ್ಬರೂ ನಿಜವಾಗಿ ಲಜ್ಜಿತರಲ್ಲದಿದ್ದರೂ ಮಹಾಶ್ವೇತೆಗಿಲ್ಲದಿದ್ದ ಒಂದು ಒಳಕೋಟಲೆಯ ಸನ್ನಿವೇಶ ಕಾದಂಬರಿಗೆ ಬಂತು: ಲೋಕಕ್ಕೆ ಡಂಗುರಹೊಯ್ದಂತೆ ತಿಳಿದಿತ್ತು ಆಕೆಯ ಪ್ರತಿಜ್ಞೆ. ಆದರೆ ಚಂದ್ರಾಪೀಡನು ಕಾಣಿಸಿದ ಕೂಡಲೆ ತಾನು ಸೋತುಬಂದಿಯಾದ್ದಕ್ಕಾಗಿ ಆಕೆಗೆ ನಾಚಿಕೆಯಾಯಿತು.

ಪ್ರೇಮದ ಎದುರು ಆಕೆ ಮುಗ್ಧೆ; ಲೋಕಾನುಭವವಿಲ್ಲದವಳು. ಇಲ್ಲಿ ಕಟ್ಟುವ ಶೃಂಗಾರ ಲೌಕಿಕ ಸೊಗಸಿನದು, ಲಲಿತಕಲಾವಿಲಾಸವುಳ್ಳದ್ದು. ಇಬ್ಬರ ಬದುಕನಲ್ಲಿಯೂ ವಿರಹ, ಕರುಣೆ ಪ್ರಬಲಿಸಿದರೂ ಕಾದಂಬರಿಯದು ಹೆಚ್ಚು ಮೃದುಲವಾದ, ಸಪುರವಾದ, ಕ್ಲೇಶತಾಳಲಾರದ ದೇಹವೃತ್ತಿ, ಚಿತ್ತವೃತ್ತಿ. ಮಹಾಶ್ವೇತೆ ತಾಪಸಕುಮಾರರಿಗೆ ನಮಸ್ಕರಿಸಿ ಎದುರು ನಿಂತು ವೃತ್ತಾಂತಕೇಳಬಲ್ಲಳು. ದಿಟ್ಟಳಾಗಿ ಅವರನ್ನು ಮಾತನಾಡಿಸಿದಳು. ಕಿವಿಯೊಡವೆ ಯಾವ ಹೂಗೊಂಚಲಿಂದಾದುದೆಂದು ಕೇಳಿ ಅಭಿಲಾಷೆಯ ಹಾವ ತೋರಿಸಿದಳು. ಕಾದಂಬರಿಗೆ.

ಅಂತಹ ಮುಂದಾಳ್ತನವಿಲ್ಲ. ಚಂದ್ರಾಪೀಡನಿಗೆ ಸ್ವಾಗತ ಕೊಡುವಾಗಲೂ ತಾಂಬೂಲ ದಾನಮಾಡುವಾಗಲೂ ಬೀಡಾರ ವ್ಯವಸ್ಥೆಮಾಡಬೇಕಾದಾಗಲೂ ಮಹಾಶ್ವೇತೆ ಒತ್ತಿ ನುಡಿ ಸಬೇಕು, ಕೆಲಸಮಾಡಿಸಬೇಕು. ಕುಮಾರನು ಕುಳಿತಿದ್ದ ಕಲ್ಲಹಾಸರೆಗೆ ಬಂದು ಒಂದುಸಲ ಮಾತನಾಡಿಸಿ ಹೋಗುವ ಳಾದರೂ ಅದು ಅತಿಥಿಗೆ ತೋರುವ ಮರ್ಯಾದೆ. ಅವನ ಲೋಕ, ಊರು, ಮನೆ, ತಂದೆ ತಾಯಿ ಬಂಧುವರ್ಗದ ಕ್ಷೇಮ ವಿಚಾರಣೆಗಾಗಿ. ಇಷ್ಟೇ ಹೊರತು ತನ್ನ ಎದೆಯಾಸೆ ತೋರಲು ಇತರರ ನೆರವುಬೇಕು. ಮಹಾಶ್ವೇತೆಯೊ, ಮದಲೇಖೆಯೊ, ಕೇಯೂರಕನೊ ಪುತ್ರಲೇಖೆಯೊ ವಿಶದಪಡಿಸಬೇಕಾದ್ದು; ಇಲ್ಲವೇ, ಚಂದ್ರಾಪೀಡನೇ ಸಂದೇಹವನ್ನು ಬಗಿದು ಅನು ಮಾನಿಸಿ ತಿಳಿಯಬೇಕಾದ್ದು. ಮಹಾಶ್ವೇತೆ ನೇರ ಅಭಿಸಾರಿಕೆ ಯಾಗಿ ಹೋದರೆ ಈಕೆ ದೀನಳಾಗಿ ಪತ್ರಲೇಖೆಗೆ ತನ್ನ ಕೊರ ಗನ್ನೂ ಭಂಗವನ್ನೂ ಏಕಾಂತದಲ್ಲಿ ತೋಡಿಕೊಳ್ಳಬೇಕಾಗು ತ್ತದೆ. ಈಕೆಯ ಪ್ರಣಯದ ಬೆಳವಣಿಗೆಯನ್ನು ಕವಿ ಮೆಟ್ಟಲು ಮೆಟ್ಟಲಾಗಿ ತೋರಿಸುತ್ತಾನೆ. ತಕ್ಕ ಆವರಣ ಕಟ್ಟುತ್ತಾನೆ: ಶಾಲೀನತೆ, ನೈಬೆಮರು, ಮಂದಹಾಸ, ಕಡೆಗಣ್ಣೋಟ, ತಳಿರಹಸೆ, ಹೂ, ಬೀಸಣಿಗೆ, ಮಲಯಜ, ಹಿಮಗೃಹ, ಸಂಗೀ ತಂದಿ ಕುಶಲಕಲೆಗಳ ಪ್ರಪಂಚದಲ್ಲಿ ಕೆಳದಿಯರು ಬಂದು ಹೋ ಗುವುದು, ಇಲ್ಲಿನ ಮದನವಿನ್ನಾಣಗಳ ನಿವೇದನೆ ಆಗುವುದು.

ಆಕೆಯ ಮನಸ್ಸು ಇತರರ ಗುಣವನ್ನು ಒಪ್ಪಿಕೊಳ್ಳಬಲ್ಲದು. ತನಗಿಂತ ಮೇಲಾದ ಪತ್ರಲೇಖೆಯ ಚೆಲುವಿಗೆ ಆಕೆ ಸಂತೋಷಿ ಸಬಲ್ಲಳು. ಮಹಾಶ್ವೇತೆ ತನಗಿಂತ ಎಷ್ಟು ಹಿರಿಯಳೆಂಬ ತಿಳಿವಳಿಕೆ ಇರುವುದರಿಂದ ಆಕೆ ನಡಸಿದಂತೆ ನಡೆಯಲು ಒಪ್ಪ

ವಳು. ಚಂದ್ರಲೋಕದಿಂದ ಗಂಡನಿಗಾಗಿ ರೋಹಿಣಿದೇವಿ ಇಳಿದುಬಂದು ಹೇಗೆ ಪತಿಸೇವೆ ಮಾಡುತ್ತಿದ್ದಳೆಂದು ಕೇಳಿ ಆ ಸಾಧ್ವಿಯ ಹಿರಿಮೆ ಋಜುವೃತ್ತಿಗಳಿಗೆ ತಲೆಬಾಗಿ ಒಂದು ಮಾತನ್ನೂ ಆಡಲರಿಯದೆ ಅದಕ್ಕೆ ಕಾಣಿಕೆ ಕೊಡುವಳು.

ಎಲ್ಲರಿಗೂ ಪ್ರಿಯಳು. ಅತ್ತೆಮಾವಂದಿರಿಗೆ ಕೂಡ ಒಂದು ಕ್ಷಣದಲ್ಲಿ ವಿಶ್ವಾಸವುಂಟುಮಾಡಿದಳು. ಹೆಣ್ಣ ಜೀವದಲ್ಲಿ ಯಾವ ಮೆಲ್ಪು, ಸವಿ, ನಯ, ನವುರು, ಲಾಲಿತ್ಯ, ಭಕ್ತಿ ಕಾಣಬಹುದು ಅವುಗಳ ಕೆನೆ ಕಡೆದು ಊಡಿದಂತಿದೆ—ಆಕೆಯ ಮಾತು, ಮನಸ್ಸು, ನಡೆಗಳಲ್ಲಿ. ಆದರೂ ಮಹಾಶ್ವೇತೆ ಕಾದಂಬರಿಯು ರನ್ನು ಹೋಲಿಸಿ ತಾರತಮ್ಯ ಹೇಳಬೇಕಾಗುವಾಗ ಕಾದಂಬರಿ ಯಂತಹ ಮಾನಿನಿಗೆ ಎಲ್ಲಿ ಅಪಚಾರವಾದೀತೊ ಎಂಬ ಭಯ ವುಂಟಾಗುವುದು. ಒಂದು ಹಣ್ಣು ಇನ್ನೊಂದು ಹುವ್ವು; ಒಂದು ಶಿಲ್ಪ ಇನ್ನೊಂದು ಚಿತ್ರ; ಒಂದು ಸೂರ್ಯ, ಇನ್ನೊಂದು ಚಂದ್ರ, ಒಂದು ತಪಸ್ಸು ಇನ್ನೊಂದು ಮೃದುಲತೆ. ಎರಡು ಬಗೆಯ ಸುಂದರತೆಗೂ ಮನಸ್ಸು ಒಲಿಯುವುದು. ಇಬ್ಬರವೂ ಹಿರಿಜೀವಗಳು ಎಂದೇ ಕವಿ ಹೆಣ್ಣಹಿರಿತನದ ಈ ಎರಡು ಚಿತ್ರಗಳನ್ನು ಬಣ್ಣಿಸುವುದು.

ಎರಡರ ಒಲವೂ ಮೋಹಕವೇ. ತಮ್ಮ ಭಕ್ತಿಯಿಂದ ಇನಿಯರನ್ನು ಬದುಕಿಸಿಕೊಂಡವು. ಆಕೆ ತಪಸ್ಸಿನಿಂದ ಜೀವ ವೆರೆವರೆ ಈಕೆ ಅರ್ಚಿಸುತ್ತ ಸೋಂಕಿನೊಳಗಿದ್ದು ತನ್ನ ಪ್ರೇಮದ ಉಸಿರೂಡಿ ಇನಿಯನಿಗೆ ಜೀವ ತುಂಬಿ ಬದುಕಿಸಿಕೊಂಡಳು.

೮. **ಪುಂಡರೀಕ** — ಪುಂಡರೀಕನ ಹುಟ್ಟು ಸಾವು ಸಂಸ್ಕಾ ರಗಳ ಕಥೆಯೇ ಕಾದಂಬರಿಯ ನೆಲಗಟ್ಟು. ಹುಟ್ಟಿದಂದು ತೊಟ್ಟು ಕಡೆಯ ವರೆಗೂ ಆತನ ಬಾಳನ್ನು ವಿಧಿ ನಡಸಿತೆನ್ನ

ಬಹುದು. ಆ ವಿಧಿ ನಾಲ್ಕೈದು ಇತರ ಜೀವಗಳನ್ನು ಸೆಳೆದು ಕೊಂಡು ಪಾರುಪತ್ಯ ಮಾಡಿತು.

ಸ್ವರ್ಗದ ಮಹಾಮುನಿ ಶ್ವೇತಕೇತು; ಅತಿ ಚೆಲುವ. ಒಂದುದಿನ ಸರೋವರದಲ್ಲಿ ಸ್ನಾನಕ್ಕಿಳಿದಿರಲು ಅಲ್ಲಿ ವಾಸವಾಗಿದ್ದ ಅಪ್ಸರೆ ಲಕ್ಷ್ಮಿ, ಆತನಲ್ಲಿ ಮೋಹಗೊಳ್ಳಲು ಅವರಿಗೆ ಮಗನಾಗಿ ಪುಂಡರೀಕನು ಹುಟ್ಟುವನು. ಶಿಶುತನ ಕಳೆಯಲು 'ತಂದೆ ಇವನನ್ನು ವಿದ್ಯಾಪಾರಂಗತನಾಗಿ ಮಾಡಿ ಯತಿತ್ವ ಕೈಕೊಳಿಸಿದನು. ಆದರೂ ತಾಯಿ ಕಾರಣದಿಂದ ಕಾಮಾತುರನಾಗಿ ಅಲ್ಪಾಯುವಾಗಿ ಹುಟ್ಟಿದ ಇವನಿಗೆ ಕೂಡಲೆ ತಂದೆ ಆಯುಸ್ಕರ ಹೋಮಮಾಡಿದ್ದರೆ ಹೊತ್ತ ಪೀಡೆ ಕಳೆಯುತ್ತಿತ್ತು. ತಡವಾದ್ದರಿಂದ ಮದನ ಜ್ವರಸಂತಾಪ ಮರಣಕ್ಕೆ ಹುಡುಗನು ಸುಲಭವಾಗಿ ಈಡಾದನು. ಹೀಗೆ ಕರ್ಮಕ್ಕೆ ಮಗುವಾಗಿ ಹುಟ್ಟಿ ಶಾಸ್ತ್ರಜ್ಞಾನ, ಮತಿ, ನೇಮ ಎಷ್ಟಿದ್ದರೂ ಸಾಲದೆ ಬೆಂಕಿಗೆ ಬೆಣ್ಣೆ ಕರಗುವಂತೆ ಕಾಮಕ್ಕೆ ಕರಗಿಹೋದನು.

ವಸಂತಮಾಸದಲ್ಲಿ, ಚತುರ್ದಶಿಯ ದಿನ ಶಿವದರ್ಶನಕ್ಕಾಗಿ ಹೊರಟ ಸಂದರ್ಭ ವಿಧಿವ್ಯಾಪಾರಕ್ಕೆ ಅನುಕೂಲ ಸನ್ನಿವೇಶವಾಯಿತು. ಅಂದು ನಡೆದ ಸಂಗತಿಗಳೆಲ್ಲ ವ್ರತವಿರುದ್ಧವೇ. ವನದೇವಿ ಬಂದು ಪಾರಿಜಾತವನ್ನು ಮುಡಿಸಬೇಕೇಕೆ? ಇವನು ಬೇಡ ಬೇಡವೆನ್ನುತ್ತಿದ್ದರೂ ಆಕೆಯ ಮೇಲಿನ ಕರುಣದಿಂದ 'ಈಕೆಗೆ ಸಂತೋಷಂ ಮಾಡಿಂ' ಎಂದು ಕಪಿಂಜಲನು ಒತ್ತಾಯಪಡಿಸಬೇಕೇಕೆ? ದಾರಿಯಲ್ಲಿ ಮಹಾಶ್ವೇತೆ ಕಂಡು ತನ್ನಲ್ಲಿ ಏಕೆ ಮೋಹಗೊಳ್ಳಬೇಕು? ಬುದ್ಧಿವಂತಳಾಗಿ ಮನೆಗೆ ಹಿಂದಿರುಗದೆ ವಂದಿಸಿ ಹೋಗುವೆನೆಂದು ಆಕೆ ಏಕೆ ತೀರ್ಮಾನಿಸಬೇಕು? ಎಂದೂ ಇಲ್ಲದ ಕಾಮೋದ್ದೀಪನ ತನಗೆ ಆಗಿ

ಮನಸ್ಸೇಕೆ ಚಲವಾಗಬೇಕು? ಹೆಣ್ಣು ಕುತೂಹಲದಿಂದ ಪಾರಿಜಾತದ ಸಂಗತಿ ಕೇಳಿದರೆ ಅದನ್ನು ದಾನಮಾಡಿದುದಲ್ಲದೆ ಆಕೆಗೆ ಮುಡಿಸಲೇಕೆ ತಾನು ಮುಂಬರಿಯಬೇಕು? ಸರಿ, ಒಡ್ಡಿತು ವಸಂತಶಕ್ತಿ. ವಿಧಿ ಕೆರಳಿತು. ಒಡೆಯಿತು ನಿಯಮ. ವಿಕಾರ ಆಸೆಯಾಯಿತು; ಆಸೆ ತಾಪವಾಯಿತು; ತಾಪ ಜ್ವರವಾಗಿ ದುರ್ನಿವಾರವಾಯಿತು. ವೇದನೆ ತಾಳಲು ಅಸಮರ್ಥನಾಗಿರಲು ಯಾವ ಬೋಧೆ ಬೇಡಿಕೆ ತೆಗಳಿಕೆಗಳೂ ತಡೆಯವಾದವು. ಇದರ ಮೇಲೆ ಚಂದ್ರಕಾಂತಿ ಬೇರೆ ವಿಜೃಂಭಿಸಿದೆ. ಪೃಥ್ವಿಯ ಆಳದಲ್ಲಿದ್ದುಕೊಂಡು ಮನುಷ್ಯರಕ್ತವನ್ನು ಕುದಿಸಿ ಅವಿವೇಕಕ್ಕೆಳೆಯುವ ಪ್ರಕೃತಿಯ ಪ್ರಚಂಡ ಶಕ್ತಿಗಳು ಆತನನ್ನು ಮುರಿದುವು.

Gods and men, we are ever deluded thus
It breaks out in the heart and we bleed

(ದೇವರು ಮಾನವರು ನಾವೆಂದಿಗೂ ಹೀಗೆಯೆ; ಭ್ರಾಂತರಾಗುತ್ತೇವೆ. ಎದೆ ಒಡೆದು ಅದು ಹೊಮ್ಮುವುದು; ನಾವು ನೆತ್ತರು ಕಾರುವೆವು.)

೯. ಪುಂಡರೀಕನ ಕಥೆ ವೈಶಂಪಾಯನನಲ್ಲಿ ಮುಂದುವರಿಯುವುದು. ಅಗಲಿ ಬದುಕಲಾರರೆಂಬಂತಿದ್ದ ಗೆಳೆಯರು ಅಗಲಿದುದೇ ಅನರ್ಥವಾಯಿತು. ಈ ಹುಟ್ಟಿನಲ್ಲಿ ಚಂದ್ರಾಪೀಡನು ತಂದೆಯ ಅಪ್ಪಣೆಯಂತೆ ಊರಿಗೆ ಮರಳಲು ಹಿಂದೆ ಕಾದಿದ್ದು ಪತ್ರಲೇಖೆಯನ್ನು ತರುವ ಕೆಲಸಕ್ಕಾಗಿ ಅಚ್ಛೋದದ ಬಳಿ ಅವನು ನಿಲ್ಲಬೇಕಾದ್ದೂ, ಆ ಬಳಿಯೇ ಮಹಾಶ್ವೇತೆಯ ಆಶ್ರಮವಿದ್ದದ್ದೂ ವಿಧಿಯ ಮಾಟವೆನ್ನಬೇಕು.

ಹಿಂದೆ ಯಾವಾಸೆ ಉಂಟಾಗಿ ಮೋಹ ಬಲಿಸಿತೊ ಧೈರ್ಯ, ಅರಿವು, ಉಪಶಾಂತಿಗಳನ್ನು ಜಳ್ಳುಮಾಡಿತೊ ಅದೇ ಪ್ರಬಲ ಶಕ್ತಿ ಈಗಲೂ ಕೆಲಸಮಾಡಿತು. ದೇವ ಋಷಿಯಾಗಿ ತಡೆಯ

ಲಾಗದ ಕಾಮ ಮನುಷ್ಯನಿಗೆ ಆಗುತ್ತದೆಯೆ? ಆದ್ದರಿಂದಲೇ ಕೃತಜ್ಞತೆ ಕೆಡಿಸಿಕೊಂಡು, ಗೆಳೆಯನನ್ನು ಬಿಟ್ಟು, 'ಅಳೀಕ ಕಾಮಿ' ಯಾಗಿ 'ತನ್ನಿಂ ತಾನೆ' ಕೆಟ್ಟದ್ದು; ಎರಡು ಶಾಪಗಳನ್ನು ಹೊತ್ತದ್ದು. ಬೇರೆ ರೀತಿ ಆಗುವುದು ಶಕ್ಯವೂ ಇರಲಿಲ್ಲ. ಹಿಂದೆ ಆತನನ್ನು ಮುರಿದಿದ್ದ ಎಲ್ಲವೂ ಅಂತೇ ಇವೆ. ಯಾವ ಆತುರ ಬಳಲಿಸಿ ಕೊಂದಿತೊ ಅದನ್ನು ನಿವಾರಿಸುವ ಶಕ್ತಿ ಈಗಿಗೂ ಬಂದಿಲ್ಲ. ಪೂರ್ವಜನ್ಮದ ಸಂಗತಿಗಳೆಲ್ಲ ರಕ್ತದ ಕರೆಯಾಗಿ ಒತ್ತಡವಾಗಿ ಸೆಳೆತಗಳಾಗಿ ಇವೆ. ಅದೇ ಸರೋವರ, ಅವಳೇ ಮಹಾಶ್ವೇತೆ, ಅದೇ ಕುಂದದ ಚೆಲುವು, ನಂದದ ಒಲವು, ಕಂಡದ ಯವ್ವನ; ಅವೇ ವಸಂತ, ಮಲಯಾನಿಲ, ಚಂದ್ರತಾಪ. ಅವನ ಪ್ರೇಮ ನಿಜವಾದುದೂ ತುಂಬಿದುದೂ ಆದರೂ ಸಂಯಮವಿಲ್ಲದ್ದು; ದೌರ್ಬಲ್ಯದಿಂದ ಹುಟ್ಟಿದ್ದು, ವಿವೇಕಶೂನ್ಯವಾದದ್ದು; ಸ್ಥಾನ ಅಸ್ಥಾನವೆಂಬುದರಿಯದೆ ಗಿಳಿಯಂತೆ ಗಳಹುವ ಸ್ಥಿತಿ—

> ". . . . though strong in love, . . . all too weak
> In reason, in self-government too slow;"

ಅದ್ದರಿಂದಲೇ ಶಾಪಕೇಳಿದ ಕೂಡಲೇ 'ಕೆಡೆದು ಹೊಂದಿದನ್-ಆಯಿಳೆಯಲ್ಲ ಚೇತನಂ.' (A lifeless corpse he lay). ಮದನಜ್ವರವೇಗವೆನ್ನಿ, ದುರ್ವಹ ಪಾಪಪರಿಪಾಕವೆನ್ನಿ, ಮಹಾಶ್ವೇತೆಯ ವಾಙ್ಮಹಿಮೆಯೆನ್ನಿ, ತಂಪೆಯಿಟ್ಟ ಶಾಪವೆನ್ನಿ–ಎಲ್ಲವೂ ಕಡಿದವು. ವೈಶಂಪಾಯನನ ಕಥೆ ಮುಗಿಯಿತು.

೧೦. ಅಲ್ಲಿಗೂ ಆ ಜೀವದ ಕರ್ಮ ತಿರುಗಲಿಲ್ಲ, ಸಂಸ್ಕಾರ ಹದಗೊಳ್ಳಲಿಲ್ಲ. ಎಲ್ಲಕ್ಕೂ ಮೀರಿ ಎರಡು ಹುಟ್ಟುಕಳೆಯಲೇ ಬೇಕಾದ ಚಂದ್ರಶಾಪ ಇನ್ನೂ ಬಿಟ್ಟಿಲ್ಲ. ಗಿಳಿಯಾಗಿ ಹುಟ್ಟಿದನು.

ಮೊದಲು ಇಲ್ಲದಿದ್ದ ಒಂದು ಅನುಕೂಲ ಗಿಳಿಹುಟ್ಟಿನಲ್ಲಿ ದೊರೆಯಿತು. ಅದು ಪುಣ್ಯವೆನ್ನಬೇಕು. ಬಹುಶಃ ಕರ್ಮ ಸವೆವ ಕಾಲ ಹತ್ತಿರವಾದ ಲಕ್ಷಣ ಅದು. ಹುಟ್ಟುತ್ತಲೇ ಗಿಳಿ ತಾಯನ್ನು ತಿಂದುಕೊಂಡಿತು; ತಂದೆಯ 'ಅಭಿಮತ ಜಾಯಾವಿಯೋಗದ' ಅಳಲನ್ನು ಕಂಡಿತು; ಎದೆ ಕರಗುವ ಸಂದರ್ಭದಲ್ಲಿ ತಂದೆ ತೀರಿಕೊಳ್ಳಲು ತಬ್ಬಲಿಯಾಯಿತು. ತನ್ನ ಗತಿಯನ್ನೂ ಸ್ವಾರ್ಥವನ್ನೂ ಕಂಡು ಬೇಸರಪಟ್ಟು ನಾಚುವ ಮನೋಧರ್ಮವುಂಟಾಯಿತು. ಜಾಬಾಲಿಗಳ ಕಥೆ ಕೇಳುತ್ತ ತನ್ನ ಕಾಮಪರತೆಗೆ ನೆಲದಲ್ಲಿ ತಲೆಯನ್ನು ಕುಕ್ಕುವಂತೆ, ಪಾತಾಳ ವನ್ನು ಹೊಗುವಂತೆ ಆಯಿತು. ಭಂಗದ ನೋವಿಂದ ಜೀವ ಕಳೆದುಕೊಳ್ಳಬೇಕೆಂದಿರುವಾಗ ಗೆಳೆಯ ಕಪಿಂಜಲನು ಬಂದು ಮುದ್ದುಮಾಡಿ ಧೈರ್ಯಹೇಳಿದ್ದರಿಂದ ಅದಕ್ಕೆ ಸ್ವಲ್ಪ ಶಾಂತಿ ಬಂತು. ಇಷ್ಟಾದರೂ 'ಜಾತಿಸ್ಮರತೆಯಿಂದ' ವಿರಕ್ತಿ ಬರಲಿಲ್ಲ. ಚಂದ್ರಾಪೀಡನನ್ನು ಕಾಣಬೇಕೆಂಬ ತವಕ ಕಡಮೆಯಾಗಲಿಲ್ಲ; ಮಹಾಶ್ವೇತೆಯಲ್ಲಿ ಕೂರ್ಮೆ ನೂರ್ಮಡಿಯಾಯಿತೇ ಹೊರತು ಇಳಿಯಲಿಲ್ಲ. ತನಗಾಗಿ ಎಷ್ಟು ಜನ ನಷ್ಟಪಟ್ಟರು, ಪಡುತ್ತಿದ್ದಾರೆ ಎಂಬುದರಿತು ಅತೀವ ಪಶ್ಚಾತ್ತಾಪವಾದರೂ ಯಜ್ಞ ಮುಗಿಯುವವರೆಗೂ ತಡೆದಿರಬೇಕೆಂಬ ತಂದೆ ತಾಯಿ ಗೆಳೆಯರ ಮಾತನ್ನು ಮೀರಿ, ಜಾಬಾಲಿಹಾರೀತರ ಉಪಕಾರ ಸ್ಮರಿಸದೆ ವಲ್ಲಭಜನ ನಿರೀಕ್ಷಣ ಉತ್ಸುಕತೆಯಿಂದ ಹಾರಿಯೇ ಹೋಯಿತು. ಕೆಳೆಯೇನು, ಹಿತವೇನು, ಕೃತಜ್ಞತೆಯೇನು? ಮಾಂಸದ ಎದುರು ಗತಿಮತಿಬೋಧೆ ಗೀಧೆ ಎಲ್ಲ ತುಳಿದುಬೀಳುತ್ತದೆ.

ತಾನು ಕಾಪಾಡಿಕೊಳ್ಳಲಾರದ ಸದ್ಗತಿಯನ್ನು ಹಿತವರಾದರೂ ಸಾಧಿಸುವರಲ್ಲವೆ! ಯಜ್ಞ ಮುಗಿದ ಹೊರತು ಇದಕ್ಕೆ

ಗಿಳಿಹುಟ್ಟು ಕಳೆಯದು, ದಿವ್ಯಜನ್ಮಬಾರದು ಎಂದು ತಿಳಿದ ತಾಯಿ ತಂದೆ ಮಗನನ್ನು ತಡೆದು ಬಂಧಿಸಬೇಕಾಗುವುದು. ಜೊತೆಗೆ ಈಗಲಾದರೂ ವಿರಕ್ತಿಹುಟ್ಟಿಸಬೇಕೆಂಬ ಬಗೆಯಿಂದ ತಾಯಿ ಮಗನನ್ನು ಹೊಲೆಯರ ಹೊಲಸು ಹಟ್ಟಿಗೆ ತರುವಳು. ರೋಮ ಹೊರೆದ ಪಸಿತೊವಲ ಪಂಜರದಲ್ಲಿಕ್ಕಿ, ಮಹಾಶ್ವೇತೆಯ ಅವ ಲೋಕನಕ್ಕೆ ತಗೆಮಾಡುವಂತೆ ಪಡಿಯಂ ಕೆತ್ತು ಅಗುಳಿಯ ನ್ನಿಕ್ಕಿ ನೀನಿಂತಿರು ಎಂದು ಹೇಳಿ ತಾನು ಸಮಾಧಾನಗೊಳ್ಳು ವಳು. ಯಾವಾಗ ಚಂಡಾಲರ ಸಂಗತಿಯಾಯಿತೊ ಆಗ ಗಿಳಿಯ ಶೋಕ ಮಿತಿಗೆ ಮುಟ್ಟಿತು. ನಿಖಿಲೇಂದ್ರಿಯನಿಗ್ರಹಕ್ಕೆ ಮನಸ್ಸು ಒಲಿಯಿತು. ಪ್ರಾಯೋಪವೇಶ ಮಾಡಬೇಕು ಎನ್ನಿಸಿತು. ಆಗ ಕರ್ಮಪರಿಪಾಕ ಆಯಿತೆಂದೇ ಲೆಕ್ಕ. ಅದೇ ಹೊತ್ತಿಗೆ ಯಜ್ಞವೂ ಮುಗಿದಿತ್ತು. ಇನ್ನು ಭಯವಿಲ್ಲವೆಂದು ಚಂಡಾಲಕನ್ಯೆ ಅಪ್ಸರೆ ಲಕ್ಷ್ಮಿಯ ರೂಪದಲ್ಲಿ ಹೋಗಿ ಜನ್ಮಾಂತರದ ಗೆಳೆಯರನ್ನು ಸೇರಿಸಿದಳು. ನರದೇಹ ಬಿಟ್ಟು ದಿವ್ಯದೇಹ ಕೊಳ್ಳುವ ಸಮಯ ವಾಯಿತೆಂದು ಹೇಳಿಹೋಗುವಳು.

ಮೂರು ಹುಟ್ಟಲ್ಲಿ ಪುಂಡರೀಕನಿಗೆ ಕಾಮ ಅಳಿಯಲಿಲ್ಲ. ವಿವೇಕ, ಸಂಯಮ ಬದುಕನ್ನು ತಿದ್ದಲಿಲ್ಲ. ಯಾವ ಗತಿಗೆ ಬಿದ್ದರೂ ಯಾರಿಗಾಗಿ ಮೊದಲು ಹಂಬಲಿಸಿ ಸತ್ತನೊ ಆ ಹಂಬ ಲಿಕೆ ಆರಲಿಲ್ಲ, ತೀರಲಿಲ್ಲ. ಆ ಮಟ್ಟಿನ ಪಶ್ಚಾತ್ತಾಪವಾದರೂ ಬಂದದ್ದು ಸಾಕೆಂದು ವಿಧಿಯೇ ಉದಾರತೆ ತೋರಿಸಿತೇನೋ— ತಂದೆಯ ಶಾಂತಿಕರ್ಮ ರಕ್ಷಿಸಿತು; ಶಾಪ ಮುಗಿಯಿತು. ಮಹಾಶ್ವೇತೆಯ ತಪಸ್ಸು ಫಲಿಸಿ ಅಮೃತವೂಡಿತು.

೧೧. **ಚಂದ್ರಾಪೀಡ**—ತಾನು ಚಂದ್ರನೆಂದು ಚಂದ್ರಾ ಪೀಡನರಿಯನು. ರಾಜಕುಮಾರನಾದ ಅವನು ಒಳ್ಳೆಯ ಮಗ

ನಾಗಿ, ಒಡೆಯನಾಗಿ, ಗೆಳೆಯನಾಗಿ ಬಾಳಿದುದು ಆತನ ವಿಶೇಷ. ಆತನ ವಿದ್ಯಾವಿನಯಗಾಂಭೀರ್ಯಗಳು ಎಲ್ಲರಿಗೂ ಮೆಚ್ಚಿಕೆ ಯಾದವು. ಸ್ವಭಾವತಃ ಸೌಮ್ಯನಾದ ಆತನಲ್ಲಿ ಶಿಕ್ಷಣದಿಂದ ಒಂದು ಸಂಯಮ ಗಳಿಕೆಯಾಗಿದೆ. ಶುಕನಾಸನ ಉಪದೇಶ ದಿಂದ ಮದಗಳ ಸ್ವರೂಪ ಗೊತ್ತಾಗಿದೆ. ಒಮ್ಮೆಗೇ ಮಹಾ ಶ್ವೇತೆಯಂಥವಳ ವಿಶ್ವಾಸವನ್ನೂ ಪಡೆದವನಾದನು.

ಮಹಾಶ್ವೇತೆಯಲ್ಲಿ ಆತನಿಗೆ ಭಕ್ತಿ, ಗೌರವ ಇದ್ದುವು. ಆಕೆ ನಡಸಿದಂತೆ ನಡೆದುಕೊಂಡನು. ಕಾದಂಬರಿಯಲ್ಲಿ ಅನು ರಾಗ ಉಂಟಾದಾಗ ಕೂಡ ಆತನ ನಡತೆ ನಿರ್ದುಷ್ಟವಾದ್ದು, ವಿವೇಕಪೂರ್ಣವಾದ್ದು. ಒಂದು ಹೆಜ್ಜೆ ಹಿಂದೆ ನಿಂತು ಕರ್ತವ್ಯವನ್ನು ಪರೀಕ್ಷಿಸಿ ತಿಳಿದು ನಡೆಯುವ ಸ್ವಭಾವವೇ ಹೊರತು ದುಡುಕುವ ಸಾಹಸವಲ್ಲ ಅವನದು. ಇಂದ್ರಿಯದ ದಾವರ ಪುಂಡರೀಕನನ್ನು ಯಾವಗತಿಗೆ ತಂದಿತೆಂಬುದನ್ನು ಕಂಡಿರುವ ನಮಗೆ ನಿಯಮಸ್ಥನಾದ ಈತನ ಚಿತ್ರದಲ್ಲಿ ಯೌವನಾನುಶಾಸನ ಕಾಣುವುದು. ಕಾದಂಬರಿಯಲ್ಲಿ ಕಂಡದ್ದು ಪ್ರೇಮದ ಚಿಹ್ನೆಗಳೇ ಎಂದು ತೋರಿದರೂ ತನ್ನ ತಾಳ್ಮೆಯಲ್ಲಿ ತಾನಿರುವನು. ಕೌಮುದಿಯಿಂದ ಎಷ್ಟೇ ಕ್ಷೋಭೆಗೊಂಡರೂ ಕಡಲು ಹೇಗೆ ಮೇರೆ ಮೀರದೊ ಹಾಗೆಯೇ ಅವಸ್ಥಾಂತರ ಅಡ ಸಿದರೂ ಮರ್ಯಾದೆಯನ್ನು ದಾಟದಿರುವ ಗಾಂಭೀರ್ಯರತ್ನಾ ಕರನು ಆತನು. ಯೌವನವಿದೆ, ರೂಪಿದೆ, ಆಸೆ ನಂಬೆನ್ನುತ್ತಿದೆ; ಹೀಗಿದ್ದರೂ ಕೇವಲ ಅತಿಥಿ ಮರ್ಯಾದೆಯೊ ಸೌಜನ್ಯವೊ ಅಥವಾ ಲೌಕಿಕ ಉಪಚಾರ ಮಾತ್ರವೊ ಆಗಿರಬಹುದಾದ್ದನ್ನು ಯೌವನದ ಉದ್ಯನ್ಮದದಲ್ಲಿ ಪ್ರೇಮವೆಂದು ಭ್ರಮಿಸಿದರೆ ಅವಿವೇಕವಾದೀತೆಂಬ ನಯದ ಭಯ ಅವನಲ್ಲಿ ಇದ್ದೇ ಇದೆ.

ಪ್ರೇಮವೇ ನಿಜವಾದರೆ ತನ್ನಷ್ಟಕ್ಕೆ ವ್ಯಕ್ತವಾಗುವುದೆಂದು ತಡೆದನೇ ಹೊರತು ಮುಡುಂ ಪ್ರವೇಶಮಾಡಲಿಲ್ಲ. ಮುಂದೆ ಕೂಡ ಕರಸಿಕೊಂಡೇ ಕಾದಂಬರಿಯಲ್ಲಿಗೆ ಹೋದಾನು. ಎರಡನೆಯ ಸಲ ಕಾದಂಬರಿಯ ಸ್ಥಿತಿಯಲ್ಲಿ ವಿವರವಿವರದಲ್ಲಿಯೂ ಪ್ರೇಮಭಾವ, ತಾಪ, ಸ್ಪಷ್ಟವಾಗುತ್ತಿತ್ತು—ಮನಸ್ಸಿಗೆ. ಆಕೆ ಆಡಲರಿಯಳು; ಕುಲೀನಳಾದ ಹೆಣ್ಣು ಆಡಬಾರದು. ಸಖಿಯರೂ ತುಟಿಮೀರಿ ನುಡಿಯುವುದು ನಡತೆಯಲ್ಲ. ಮದಲೇಖೆಯೇನೊ ತಕ್ಕಮಟ್ಟಿನ ಧ್ವನಿ ಕಾಣಿಸುವಳು:

> ನೀರೇಜ, ತಾಳವೃಂತ, ಸ
> ಮೀರಾದಿಗಳಿಂದೆ ತಾಪಂ ಒದವಿದಪುದು ನೋ
> ಡೀತರುಣಿಗೆ; ಧೀರತ್ವದ
> ನಾರತ ಸಂಗತಿ ಅದೊಂದೆ ಜೀವಾಧಾರಂ

ಕಣ್ಣು ಕಾಣುತ್ತಿರುವುದನ್ನೂ ಎದೆ ಆಶಿಸುತ್ತಿರುವುದನ್ನೂ ನುಡಿ ಪೋಷಿಸುತ್ತಿದೆಯಾದರೂ ಶ್ಲೇಷೆಯಲ್ಲಿ ಧೀರ, ತ್ವತ್ + ಅನಾರತ ಸಂಗತಿ ಆಗಬಹುದು; ಇಲ್ಲವೇ, ಧೀರತ್ವದ + ಅನಾರತ ಸಂಗತಿ ಆಗಬಹುದು. ಹೇಗೋ, ಏನೊ! ಒಂದರ್ಥದಲ್ಲಿ

> . . . ನೋವಿದು ನಿನ್ನಿಂ
> ಪಿರಿದು-ಎನ್ನದು ಅದರಿನ್ ಎಂತು
> ಸರೋಜಮುಖಿ, ನಿನ್ನ ಸುಖಮನ್- ಆಂ ಬಯಸಿದಪೆಂ

ಎಂದಿದ್ದ ತನ್ನ ನುಡಿಗೆ ಉತ್ತರದಂತೆಯೇ ಇದೆ. ಇದ್ದರೂ ಸಂದೇಹಕ್ಕೆ ಅವಕಾಶವಿರುವಾಗ ತನ್ನ ಇಷ್ಟಕ್ಕೆ ವಿರೋಧವಾದ ಅರ್ಥಮಾಡಿಕೊಂಡನೇ ಹೊರತು ಅನುಕೂಲಾರ್ಥದ ಪ್ರಯೋಜನವನ್ನು ಬಯಸಲಿಲ್ಲ.* ಕೇಯೂರಕನು ವರ್ಣಿಸಿದ ಚರ್ಯೆ

---

*ದುಷ್ಯಂತನ ನಡತೆ ಇದಕ್ಕೆ ವಿಪರೀತ: ಅಸಂಶಯಂ ಕ್ಷತ್ರಪರಿಗ್ರಹ

ಯೂ ಆಕೆಯೇ ಪತ್ರಲೇಖೆಯಲ್ಲಿ ನುಡಿದ

ಪಿರಿಯ:ರ್ಗೆ-ಇದು ಗುಣಮೋ, ಪೇಳ್
ಪರಿಚಯಕೆ-ಇದು ಫಲಮೊ, ತರುಣಿ, ಬಿಸತಂತುವಿನೊಳ್
ದೊರೆ-ಎನಿಪ-ಎಳಮನದ-ಎನ್ನಂ
ಪರಿಭವಿಪುದೆ ಕಂಡು ಕನ್ನೆಯಂ, ಯುವರಾಜಂ-

ಎಂಬ ದೂರೂ ತೀರ್ಮಾನ ತಂದವು. ಇಂತಹ ದಡ್ಡನೂ ಉಂಟೇ ಎಂದು ಚತುರರಾದ ಶೃಂಗಾರಸಾರರು ತೆಗಳುವಷ್ಟು ನಿಗ್ರಹವೃತ್ತಿ ತೋರಿಸುವನು.

ಪತ್ರಲೇಖೆಯೊಡನೆ ಆತನು ಕಳಿಸಿದ ಸಂದೇಶದಲ್ಲಿ ನಯದ ಪರಿಮಳ ತುಂಬಿದೆ. ಈ ಬಗೆಯ ನಡತೆಯಲ್ಲಿ ಒಂದು ಜೀವನ ಸಂಸ್ಕೃತಿ ನುಡಿಯುತ್ತಿದೆಯೆನ್ನಬೇಕು. ಬಾಣನ ಕಾಲದ ಸಮಾಜದಲ್ಲಿ, ಹರ್ಷನ ಸಭೆ ರಾಜಾಂತಃಪುರಗಳಲ್ಲಿ ಯಾವುದನ್ನು ನಾಗರಿಕರಾದ ಹಿರಿಯರು ಮೇಲು ನಡತೆಯೆನ್ನುತ್ತಿದ್ದರೊ ಅವನ್ನು ಚಂದ್ರಾಪೀಡ, ಕಾದಂಬರಿ, ಮಹಾಶ್ವೇತೆಯರ ಪರಸ್ಪರ ನಡೆಯಲ್ಲಿ ಕವಿ ತೋರಿಸುತ್ತಿದ್ದಾನೆನ್ನಿಸುತ್ತದೆ. ಸಂಪೂರ್ಣಸ್ವಾತಂತ್ರ್ಯವಿರುವ ಆವರಣದಲ್ಲಿ ವಯಸ್ಕರಾದ ಗಂಡು ಹೆಣ್ಣುಗಳು ಸೇರಿ ಹೊರಗೆ, ಒಳಗೆ, ಏಕಾಂತದಲ್ಲಿ ಕೂಡ ಯಾವ ಮರ್ಯಾದೆ ಸಂಯಮಗಳನ್ನು ಕಾಪಾಡಿಕೊಂಡು ಯಾರಿಗೂ ಅಪಕೀರ್ತಿ ಬಾರದಂತೆ ಹೇಗೆ ಬೆರೆಯಬಹುದೆಂಬುವಕ್ಕೆ ಈ ಮೂವರ ನಡತೆ ಉತ್ತಮ ನಿದರ್ಶನವಾಗುತ್ತದೆ. ಈತನ ಪ್ರೇಮ ಆಳವಾದ್ದಾದರೂ ಒಂದು ಶಾಖದ ಹದವನ್ನು ಕಾಪಾ

---

ಕ್ಷಮಾ ಯದಾರ್ಯಂ ಅಸ್ಯಾಂ ಅಭಿಲಾಷಿ ಮೇ ಮನಃ। ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಂ ಅಂತಃಕರಣ ಪ್ರವೃತ್ತಯ: ॥ ಆತನ ಆತ್ಮವಿಶ್ವಾಸಕ್ಕೆ ಹೇಗೊ ಅಲ್ಲಿನ ಕೆಸರು ಜಾರಿಕೆಗೂ ಅಳತೆಯಿಲ್ಲ.

ಡಿಕೊಂಡು ಬೆಳ್ಳಗೆ ಮಿರುಗುವ ಬೆಂಕಿಯ ಕೆಂಡದಂತಿದೆ. ಪುಂಡರೀಕನ ಪ್ರೇಮ ಕಾಮಜ್ವಾಲೆ. ಆ ಉರಿಗೆ ಸಿಕ್ಕಿ ರೆಕ್ಕೆಸುಟ್ಟು ಜೀವತೆರಬೇಕಾಗಿ ಬಂದ ಪತಂಗ ಅವನು.

ಗುರುಹಿರಿಯರಲ್ಲಿ ಚಂದ್ರಾಪೀಡನಿಗೆ ಭಕ್ತಿಯಿದೆ, ವಿಧೇಯತೆ ಇದೆ. ತನ್ನಿಚ್ಛೆಗೆ ವಿರೋಧವಾದರೂ ತಂದೆಯ ಅಪ್ಪಣೆ ತಲೆಯಲ್ಲಿ ಹೊರಬೇಕಾದ್ದು. ಕಾದಂಬರಿಯ ಬಳಿ ಸಾರುವ ತವಕ ತನಗೆಷ್ಟೇ ಇದ್ದರೂ ಲಜ್ಜೆಗೆಟ್ಟು ಆತನೇ ನೇರವಾಗಿ ತಾಯಿತಂದೆಗಳಿಗೆ ಹೇಳಲಾರದೆ ಗೆಳೆಯನ ಮೂಲಕ ಹೇಳಿ ಸೋಣವೆಂದು ಕಾಯುವನು. ಗೆಳೆಯನಿಗೆ ಏನು ಕೇಡಡಸಿತೊ, ತಕ್ಷಣ ಹೋದರೆ ಪ್ರಯೋಜನವಾದೀತೆಂಬ ಅವಸರದಲ್ಲಿಯೂ

ಜನನಿಗೆ ಪೇಳದೆ-ಆರ್ಯಶುಕನಾಸನನ್-ಈಕ್ಷಿಸದೆ,-ಆತ್ಮನಂ
ದನನ ನಿಯೋಗದಿಂ ಮರುಗುತಿರ್ದ ಮನೋರಮೆಯಲ್ಲಿಗೆ-ಐದದೆ,- ಆ
ನ್- ಅನುನಯದಿಂದಂ- ಆದರಿಸದೆ, ಇತ್ತಣಿನಿತ್ತಲೆ ಪೋದೊಡೆ-ಅನುಃ-ಆ
ತನ ತೆರನಪ್ಪೆನ್,- ಇರ್ಮಡಿಸುಗುಂ ಗುರುಗಳ್ಗೆ ಅತಿದುಃಖಂ; ಎನೆನೋ

ಅವರನ್ನು ಆಶ್ವಾಸಿಯೇ ಹೋಗತಕ್ಕದ್ದೆಂದು ನಿರ್ಣಯಿಸುವನು.* ಹೀಗೆ ತನ್ನನ್ನು ನಿಯಮಿಸಿಕೊಳ್ಳುವುದೂ ಇನ್ನೊಬ್ಬರ ಮನಸ್ಸನ್ನು ಅರ್ಥಮಾಡಿಕೊಳ್ಳಲು ಆತುರನಾಗಿರುವುದೂ ಅವರಿಗೆ ಮನಃಕ್ಲೇಶವಾಗುವುದನ್ನು ಮಾಡದಿರುವುದೂ ನಿಜವಾದ ಸಂಸ್ಕಾರದ ಗುರುತು.

ತನ್ನ ಜೀವದ ಗೆಳೆಯನಲ್ಲಿ ಆತನಿಗೆ ಎಷ್ಟು ಆಳವಾದ ಸ್ನೇಹವಿತ್ತು ಎಂಬುದು ಅವನು ಬಾರದುದಕ್ಕೆ ಎಷ್ಟು ಕಳವಳ

---

*ಈ ವಿವೇಚನೆ ಅತಿಯಾಗಿ ಈತನನ್ನು ಒಂದುಸಲ ವಿಷಾದಕ್ಕೆ ಎಳೆದು ದುರ್ಬಲತೆ ಸೂಚಿಸುವುದನ್ನು ಕಿನ್ನರಗಳ ಪ್ರಸಂಗದಲ್ಲಿ ಕಾಣಬಹುದು. ಅಟ್ಟೆ ಅವು ಸಿಕ್ಕದಿರಲು ಆತನಿಗೆ ಬರುವ ವಿಷಾದ ಕ್ಷತ್ರಿಯ ತರುಣನದಲ್ಲ.

ಪಟ್ಟನೆಂಬುದರಿಂದಲೂ ಅವನಳಿದ ಸಂಗತಿ ತಿಳಿದ ಕೂಡಲೆ ಹೇಗೆ ಎದೆಯೊಡೆದು ಜೀವರಹಿತನಾಗಿ ಬಿದ್ದನೆಂಬುದರಿಂದಲೂ ತಿಳಿಯಬಹುದು.

ಶೂದ್ರಕನಾಗಿ ಹುಟ್ಟಿದಾಗ ಕೂಡ ಚಂದ್ರ-ಚಂದ್ರಾಪೀಡರ ಸೌಮ್ಯತೆ, ನಿಯಮನಿಷ್ಠೆ, ಗಾಂಭೀರ್ಯಗಳೇ ಕಾಣುವುವು. ಕಾದಂಬರಿ ದೊರಕುವ ವರೆಗೂ ಬೇರೆ ಸ್ತ್ರೀಸಂಗ ಬೇಕಿಲ್ಲವೆಂಬಂತೆ ವಿರತಿಯಲ್ಲಿರುವನು. ಇಂಥವನಾದ್ದರಿಂದಲೇ ರೋಹಿಣಿ ಆ ಬಗೆಯಲ್ಲಿ ಭೂಮಿಗಿಳಿದು ಬಂದು ತನ್ನ ಹೀನತೆಯನ್ನು ಲಕ್ಷಿಸದೆ ಅವನ ನೆಳಲಂತಿದ್ದು ಪರಿಚರ್ಯೆಮಾಡಿದುದು.

---

## III. ಒಂದೆರಡು ವಿಶೇಷ ಸಂಗತಿಗಳು

೧. ಕಥೆ, ಒಂದೆರಡು ಸನ್ನಿವೇಶಗಳು, ಕೆಲವರ ಶೀಲ ಸ್ವರೂಪ ಮುಂತಾದವನ್ನು ತಿಳಿಸಲು ಮೇಲೆ ಯತ್ನಿಸಿದೆ. ಈ ಎಲ್ಲದರ ಅಡಿಯಲ್ಲಿ ಇರುತ್ತ ಎಲ್ಲವನ್ನೂ ಬೆಳಸಿ ನುಡಿಸುವ ಪ್ರಭಾವ ಪ್ರೇಮವೆಂದು ಈವರೆಗಾಗಲೇ ತಿಳಿದಿರಬೇಕು. ನಾಲ್ಕಾರು ಮಟ್ಟದ ಪ್ರೇಮವನ್ನು ಚಿತ್ರಿಸುವಾಗ ಅವಕ್ಕೆ ಬರುವ ಕಷ್ಟನಿಷ್ಠುರ, ಅಪರ ವಿಶ್ವಾಸ, ಭೀತಿ ಅಳಪರೀಕ್ಷೆ, ತಿಳಿ ಕದಡು, ಧೈರ್ಯ ತಬ್ಬಲಿತನಗಳ ಲೋಕವೂ ಕಟ್ಟಿ ನಿಲ್ಲುವುದು. ಜೊತೆಗೆ ಈ ಕಾವ್ಯದಲ್ಲಿ ಒಂದು ಲೌಕಿಕ ನಯ, ಮರ್ಯಾದೆಗಳ ಉಸಿರಬೆಸುಗೆ ಇದೆಯೆಂದೂ ತಿಳಿದಿರಬೇಕು. ಗಂಡುಗಂಡಿಗೆ, ಹೆಣ್ಣುಹೆಣ್ಣಿಗೆ, ಗಂಡುಹೆಣ್ಣಿಗೆ, ತಂದೆಮಕ್ಕಳಿಗೆ, ಆಳು ಒಡೆಯರಿಗೆ ನಡುವೆ ಇರುವ ಸೌಜನ್ಯದ ಬಗೆ ಕಥಾಸೂತ್ರದಲ್ಲಿ ನಿಂತು ಕಾಣುವುದು. ಕೇವಲ ರಕ್ತದ ಕರೆ ಅಥವಾ

ಮೂಕಸೆಳೆತದಿಂದ ಹಿಡಿದು ಸ್ವರ್ಗದ ಆಸೆಯಿಲ್ಲದೆ ನರಕದ ಭೀತಿಯಿಲ್ಲದೆ ಜನ್ಮಜನ್ಮಾಂತರಗಳಲ್ಲಿ ಭಕ್ತಿ, ನೆಚ್ಚು ತಪಸ್ಸುಗಳನ್ನು ತೊಟ್ಟು ವ್ರತಶೀಲವಾದ ಪ್ರೇಮದವರೆಗೂ ನೆಲಸಿರುವುದು.

ಗಿಳಿಗಳ ದಾಂಪತ್ಯದ ಚಿತ್ರವಿದೆ. ಕಿನ್ನರ ಮಿಥುನದ ನಿಜೇಚ್ಛೆಯ ವಿಹಾರವಿದೆ. ಅಡಗದ ಕಾಮವೃತ್ತಿಯಲ್ಲಿ ದುರ್ಗತಿಗೆ ಬಿದ್ದು ತೊಳಲುವ ರಾಗದಕಣ್ಕುರುಡು ಪುಂಡರೀಕನಲ್ಲಿ ಕಂಡರೆ, ಒಂದು ನಿಯಮ, ನಯ, ಗಾಂಭೀರ್ಯದಲ್ಲಿ ಬೆಳೆಯುವ ವ್ಯವಹಾರ ಪ್ರಪಂಚದ ಉತ್ತಮಪ್ರೇಮದ ಬಗೆ ಕಾದಂಬರಿ ಚಂದ್ರಾಪೀಡರ ಸಂಬಂಧದಲ್ಲಿ ಕಾಣುವುದು. ಶುಚಿಶೀಲಳಾಗಿ ದೃಢಳಾದ ಕುಲಾಂಗನೆ ಎಲ್ಲಿಯವರೆಗೂ ತನ್ನ ತೇಜಸ್ಸನ್ನು ಬಲಿಸಿ, ತನಗೂ ತಾನೊಲಿದವರಿಗೂ ಮಂಗಳವನ್ನು ಹೇಗೆ ತರಬಲ್ಲಳೆಂಬುದು ಮಹಾಶ್ವೇತೆಯ ಸಮನಿಲ್ಲದ ಪ್ರೇಮದಲ್ಲಿ ನಿದರ್ಶನಕ್ಕೆ ಬರುತ್ತದೆ. ಗೆಳೆಯನು ವ್ರತಕೆಟ್ಟು ಕೇಡಿಗೊಳಗಾಗುವನು, ಹೀನನಾಗುವನು. ಕೈಯಲ್ಲಾಗುವ ಮಟ್ಟಿಗೂ ಅದನ್ನು ತಪ್ಪಿಸಬೇಕೆಂದು ಪ್ರಯತ್ನಪಟ್ಟು ಪ್ರಯೋಜನವಾಗದಿರಲು ಗೊಡ್ಡು ನಿಷ್ಠುರವನ್ನು ಒತ್ತಟ್ಟಿಗಿಟ್ಟು ಅವನ ಪ್ರಾಣವನ್ನಾದರೂ ಉಳಿಸುವುದು ತನ್ನ ಕರ್ತವ್ಯವೆಂದು ಬಗೆಯುವನು. ಆಶ್ರಮವಿರುದ್ಧವಾದ ಕಾರ್ಯದಲ್ಲಿ ತೊಡಗಕೂಡದೆಂದು ತಿಳಿದಿದ್ದರೂ, ಪ್ರಣಯನಿಯೋಗ ತನ್ನಂಥವನಿಗೆ ತಕ್ಕದ್ದಲ್ಲವೆಂದು ಅರಿತಿದ್ದರೂ ಆ ಅಪರಿಚಿತ ಪ್ರಪಂಚಕ್ಕೆ ಪ್ರವೇಶಿಸಿ ಗೆಳೆಯನನ್ನು ಉಳಿಸಬೇಕೆಂದು ಮಹಾಶ್ವೇತೆಯನ್ನು ಬೇಡುವ ಕಪಿಂಜಲನ ಸ್ನೇಹವೃತ್ತಿಯೂ ಸಹಾಯಬುದ್ಧಿಯೂ ಉದಾತ್ತವಾದವು. ಅವನ ಚಿಂತೆಯಲ್ಲಿರುವಾಗ ಶಾಪಹೊಂದಿ, ವಾಹನವಾಗಿ ಕಷ್ಟಪಟ್ಟು, ಯಾವ ಸ್ಥಿತಿಯಲ್ಲಿಯೇ ಗೆಳೆಯ

ನಿರಲಿ ನೋಡಿದ ಹೊರತು ಜೀವ ನಿಲ್ಲದೆಂಬಂತೆ ಆಸಕ್ತಿ ತಳೆದು ಗಿಳಿಯ ಬಳಿಗೆ ಹೋಗಿ ಮಾತನಾಡಿಸಿ, ಸಮಾಧಾನ ಮಾಡಿ, ಆತನ ಗತಿ ಉತ್ತಮಗೊಳ್ಳಲು ಎಲ್ಲ ಬಗೆಯಲ್ಲಿಯೂ ನೆರವಾದ ಆತನ ಚಾರಿತ್ರ ಲೋಕೋತ್ತರವಾದದ್ದು. ತಾನೇ ರಾಜನ ಮಗಳಾಗಿ ಹುಟ್ಟಿ, ಕುಲ, ಶೀಲ ರೂಪಸಂಪನ್ನತೆ ಗಳಿಂದ ಯಾವ ಚಕ್ರವರ್ತಿಗೇ ಆಗಲಿ ಯೋಗ್ಯಳಾಗಬಲ್ಲ ಗುಣವುಳ್ಳವಳಾಗಿರುತ್ತ, ದುರದೃಷ್ಟದಿಂದ ತಂದೆತಾಯ್ಗಳನ್ನು ಕಳೆದುಕೊಂಡು, ಊರು ಜನ ಎಲ್ಲಾ ಉರಿದು ನಾಶವಾಗಿರಲು ಅವನ್ನು ನಾಶಮಾಡಿ ತನ್ನನ್ನು ತಬ್ಬಲಿಗೊಳಿಸಿದ ಅರಸನ ಮಗನಿಗೇ ಕೆಳದಿಯಾಗಿ ಅಡಪದ ಊಳಿಗದಲ್ಲಿ ನಿಂತು ಆತನು ಮತ್ತೊಬ್ಬಳನ್ನು ಪ್ರೀತಿಸುವಾಗ ಆ ಪ್ರಿಯರ ಪ್ರೇಮಾಭಿವೃದ್ಧಿ ಕಾರ್ಯದಲ್ಲಿ ತೊಡಗಿದ ಪತ್ರಲೇಖೆಯ ಭಕ್ತಿ ಅಸಾಧಾರಣ ವಾದುದು. ಅಂತೆಯೇ ಚಂದ್ರನು ಭೂಮಿಯಲ್ಲಿ ಹುಟ್ಟಬೇಕಾಗಿ ಬರಲು ಎಷ್ಟು ಬೇಡವೆಂದರೂ ಕೇಳದೆ ಆತನ ಹಿಂದೆಭೂಮಿಗೆ ಬಂದು ನೆಳಲಂತೆ ಹಿಂಬಾಲಿಸುತ್ತಿದ್ದು, ಸುಖದುಃಖಗಳಲ್ಲಿ ಭಾಗಿಯಾಗಿ ಆತನು ಜನ್ಮಾಂತರಕ್ಕೆ ಹೋಗುವ ಸಮಯದಲ್ಲಿ ಮುಂದಿನ ಮಂಗಳಕ್ಕೆ ಸಾಧಕವಾದ ಕಾರ್ಯವನ್ನು ಮಾಡಿದುದು ಆ ಪತ್ರಲೇಖೆ-ರೋಹಿಣಿಯ ಭವ್ಯಸತೀತ್ವದ ಕುರುಹಾಗಿದೆ. ಕೆಳದಿಯರು, ಸೇವಕರು ರಾಣಿವಾಸದವರು, ಮಂತ್ರಿಜನ, ತಾಯ್ತಂದೆಯರು, ಅತ್ತೆ ಸೊಸೆಯರು, ಬೀಗರು, ಎಲ್ಲರೂ ಎಷ್ಟು ಸುಮನಸರಾಗಿ ನಡೆದುಕೊಳ್ಳಬಹುದೆಂಬುದಕ್ಕೆ ಕಾದಂ ಬರಿಯ ಪ್ರಸಂಗಪ್ರಸಂಗದಲ್ಲಿಯೂ ಉದಾಹರಣೆ ಇದೆ.

ಆದುದರಿಂದಲೇ ವಿಷಮವಾದ ಸಂದರ್ಭ ಒಂದೊದಗಿ ದರೂ ಅದು ಕೊಲೆಯಷ್ಟು ಕರ್ಕಶವಾಗುವುದು.

೨. ಎರಡು ಸಣ್ಣ ಪ್ರಸಂಗಗಳಿಂದ ಒಂದೊಂದು ಪದ್ಯವ ನ್ನೆತ್ತಿ ಇಲ್ಲಿನ ನಡತೆಯಲ್ಲಿಯೂ ಕವಿದರ್ಶನದಲ್ಲಿಯೂ ಹೊಮ್ಮು ವುವ ಸರಸವಿರಸಗಳ ಒಂದೊಂದು ಚಿತ್ರವನ್ನು ತೋರಿಸಿ ಈ ಸಮಾಲೋಚನೆಯನ್ನು ಮುಗಿಸಲಾಗುವುದು.

೩. ಗಿಳಿ ಶೂದ್ರಕ ಮಹಾರಾಜನಿಗೆ ಜಯಾಶೀರ್ವಾದ ಮಾಡುವ ಪದ್ಯ ಪ್ರಖ್ಯಾತವಾದ್ದು. ತಿರ್ಯಕ್‌ಜಾತಿಯಲ್ಲಿ ಈ ಚಾತುರ್ಯ ಇದೇನೆಂದು ಸಭೆ ಸೋಜಿಗ ಪಡುವಂತಹ ನಡತೆ, ವಾಣಿ ಅದರದು. ವರ್ಣ ಮಾತ್ರಾ ಸ್ವರರುಚಿರವಾದ ಆರ್ಯೆಯನ್ನು ವ್ಯಕ್ತವಾಗಿ, ಅಸ್ಖಲಿತವಾಗಿ, ಸುಲಲಿತವೆಂಬಂತೆ ಹೇಳಿತು. ಹರಕೆ ರಾಜನಿಗೆ ಜಯವಾಗಲಿ ಎಂದು. ಆದರೆ ಈ ಪದ್ಯದಲ್ಲಿ ಅಡಗಿರುವ ಭಾವ ಕೆಲವರಿಗೆ ದುಸ್ಸಹವಾಗಬಲ್ಲದು.

ರಾಜನಿಗೆ ಜಯವಾಗಲಿ ಎನ್ನಿ. ರಾಜನ ಹಗೆಗಳು ಹೆಸ ರಿಲ್ಲದೆ ಅಳಿಯಲಿ ಎನ್ನಿ. ಅವನ ಹೆಂಡಿರು ವಿಧವೆಯರಾಗಲಿ ಎಂಬ ಬರ್ಬರತೆಯಮೂಲಕ ಏಕೆ ಹರಸಬೇಕು? ಇವನಿಗೆ ಕೆಡುಕುಮಾಡದ ಹೆಣ್ಣುಗಳ ಅಳಲು, ವೈಧವ್ಯದ ನೋವು, ಬೇಗೆ, ಕಣ್ಣೀರುಗಳನ್ನು ಮಹಾಪೂರವಾಗಿ ವರ್ಣಿಸಿ, ಹೆಣ್ಣು ಗಳಾದ ಅವರಿಗೆ ತಾಳಲಾಗದ ಅಳುವನ್ನು ತಂದದ್ದು ಏನು ವೀರವರ್ತನೆ? ಹಿಂದೂ ಸಮಾಜದಲ್ಲಿ ವೈಧವ್ಯದುಃಖ ಅಳಿಯ ತೀರದು; ನುಡಿದು ಮುಗಿಯದು. ಈ ದೇಶದಲ್ಲಿ ಆ ಚಿತ್ರದ ಉರಿ ಬೇಗೆಯನ್ನು ಬಾಯಿ ಚಪ್ಪರಿಸುತ್ತ ವರ್ಣಿಸಬಾರದೆನ್ನಿಸು ತ್ತದೆ. ಒಂದು ಸಂಪ್ರದಾಯವೇ ಈ ಬಗೆಯ ಚಮತ್ಕಾರವನ್ನು ಇನ್ನೂ ಮೆಚ್ಚುತ್ತಿದೆಯಾದ್ದರಿಂದ ಈ ಮಾತನ್ನು ನುಡಿಯು ತ್ತಿದೆ. ಇಲ್ಲಿನ ಶ್ಲೇಷೆಯ ಅಂಶ ಅಂಶವೂ ಅನಾರ್ಯವಾಗಿದೆ.

ವೀರರ ವೀರ, ನಿನ್ನ ಹಗೆಗಳ ಮಡದಿಯರ ಎರಡೂ ಸ್ತನ,

ಕಣ್ಣೀರಿಂದ ಮಿಂದು, ಎದೆಗಿಚ್ಚಿಂದ ಬೆಂದು, ವಿಮುಕ್ತಾಹಾರ ವಾಗಿ, ತಪಸ್ಸನ್ನು ಆಚರಿಸುವುವು. ಪ್ರತಕ್ಕೆ ಸ್ನಾನ, ಬೆಂಕಿಯ ತಾಪ, ಆಹಾರವಿಲ್ಲದ 'ಉಪವಾಸ' ಬೇಕಷ್ಟೇ! ಇಲ್ಲಿ ಅಂತಹ ವ್ರತವಿದೆ ನೋಡಿ. ಶೂದ್ರಕನು ಗೆದ್ದ ಕಾರಣದಿಂದ ಅವನ ಹಗೆಗಳ ಮಡದಿಯರ ಐದೆತನ ಹರಿಯಿತು; ಅತಿ ಹತ್ತಿರದಲ್ಲಿ ಉರಿಯುವ ಎದೆಗಿಚ್ಚಿಂದ ಅವರ ಸ್ತನ ಬೇಯುತ್ತಿವೆ: ಸುರಿಯುವ ಕಣ್ಣೀರಿಂದ ಸ್ನಾನಮಾಡುತ್ತಿವೆ; ಸೌಮಂಗಲ್ಯಸೂಚಿಯಾಗಿ ಮೇಲಾಡುವ ಕೊರಲ ಮುತ್ತಿನ ಹಾರ ಇಲ್ಲವಾಗಿವೆ. ಇದು ಯಾವ ಬಗೆಯ ಗೆಲವನ್ನು ಮೆರಸುವ ಧರ್ಮವೃತ್ತಿಯೊ ಸಹೃದಯರು ಯೋಚಿಸಬೇಕು. ಹರಸುವುದಾದರೂ ಯಾರು? ಗಿಳಿ;- ವೈಶಂಪಾಯನ–ಪುಂಡರೀಕ. ಪ್ರೇಮದ ಅಗಲಿಕೆ ಎಂಥದು, ಅದರ ಪರಿಣಾಮವೇನು ಎಂಬುದರ ಅರಿವು ಯಾರಿಗಾದರೂ ಪೂರ್ಣವಾಗಿರುವುದು ಶಕ್ಯವಾದರೆ ಮೂರು ಹುಟ್ಟುಗಳಲ್ಲಿ ಅನುಭವಿಸಿ ತಿಳಿದಿದೆ–ಗಿಳಿ. ತನ್ನ ಅಗಲಿಕೆಯಿಂದ ಮಹಾಶ್ವೇತೆ ಏನಾಗಿದ್ದಾಳೆಂದು ಅದಕ್ಕೆ ಗೊತ್ತಿದೆ. ಪ್ರೇಮದ ಶುಚಿಸಂಪತ್ತಿಯನ್ನು ಬೆಳಗುವ ಮಹಾಕಾವ್ಯದಲ್ಲಿ ಮಂಗಳಾಚರಣದಂತಿರುವ ಈ ಪದ್ಯವನ್ನು ಗಿಳಿಯ ಬಾಯಲ್ಲಿ ಹೇಳಿಸುವುದು ಸರಿಯಲ್ಲವೆನಿಸುವುದು. ಕವಿ ಈ ನಮ್ಮ ವಿಪರೀತ ರೀತಿಯಲ್ಲಿ ಯೋಚಿಸಲಿಲ್ಲ. ಅವಕ್ಕೆ ಎಷ್ಟು ಪಾಂಡಿತ್ಯವಿತ್ತು ಎಂದು ತೋರಿಸಿ ಎಲ್ಲರನ್ನೂ ಬೆರಗುಗೊಳಿಸುವುದು ಅವನ ಉದ್ದೇಶ. ಕಾವ್ಯದಲ್ಲಿನ ವೈಧವ್ಯ, ಅಳಲು, ಮುತ್ತಿನ ಹಾರ, ತಪಸ್ಸುಗಳನ್ನು ಬಳಸಿನಲ್ಲಿ ತೋರಿಸುವುದು ಆತನ ಇಚ್ಛೆಯೂ ಆಗಿರಬಹುದು. ಉಕ್ತಿ ಚಾತುರ್ಯದ ಮೂಲಕ ಅರ್ಥ ಪ್ರೌಢಿಯನ್ನು ಕಾಣಿಸುವ ಪದ್ಯವನ್ನು ಬರೆದು ಜಗತ್ತಿನ ಮೆಚ್ಚುಗೆ ಬೇಡಿದ.

ಮೆಚ್ಚುಗೆ ಕೊಡಬಹುದು. ಆದರೆ ಇಂತಹ ಪದ್ಯ ಕಾವ್ಯದ ಮೂಲ ರಾಜಾಶೀರ್ವಾದವಾಗಿ ಇರುವುದು ಬೇಡವೆನ್ನಿಸುತ್ತದೆ.

೪. ಕಾದಂಬರಿಯಿಂದ ಚಂದ್ರಾಪೀಡನು ಮೊದಲಸಲ ಬೀಳ್ಕೊಳ್ಳಲು ಬಂದಾಗ ಮಹಾಶ್ವೇತೆಯ ಬಾಯಲ್ಲಿ ಹೇಳಿ ಸುವ ಮಾತು ದಿವ್ಯವಾದುದು. ಒಟ್ಟು ಆ ಬೆಳಗ್ಗಿನ ಸನ್ನಿವೇಶ ಅತಿ ರಮಣೀಯವಾಗಿದೆ:

ಒಂದು ದಿನ ಮಟ್ಟಿಗೆ ಬಂದು ವಿಶ್ರಮಿಸಿ ಹೋಗಬೇಕೆಂದು ಹೇಳಿ ಆತನನ್ನು ಮಹಾಶ್ವೇತೆ ಕರೆತಂದಿದ್ದಳು. ಬಂದದ್ದಾಯಿತು; ಊರು ನೋಡಿದ್ದಾಯಿತು. ಊರಕಣ್ಣಿಗೆ ಉತ್ಸವ ಉಂಟುಮಾಡಿಯಾಯಿತು. ಯಾರು ಸುಖಪಟ್ಟರೆ ಊರು ಸುಖಪಡಬಲ್ಲದಿತ್ತೊ ಆಕೆಯನ್ನು ಪಡಿಸಿಯಾಯಿತು. ಆತನು ಹಿಂದಿರುಗುವುದು ಯಾರಿಗೂ ಇಷ್ಟವಿಲ್ಲ. ಆದರೆ ಅಗತ್ಯ. ಬೆಳಗ್ಗೆ ಕುಮಾರನು ಬಂದಿದ್ದಾನೆ; ಬಾಯಿಂದ ಮಾತು ಹೊರಡದು; ಮಹಾಶ್ವೇತೆಯ ಮುಖವನ್ನು ದೀನಮಂದಹಾಸದಿಂದ ನೋಡಿದ್ದಾನೆ. ಆಕೆಗೆ ಅಭಿಪ್ರಾಯವಾಗುವುದು. ಆಗ ಕಾದಂಬರಿಯನ್ನು ಕುರಿತು —

ಮಹಾಶ್ವೇತೆ–ಬೆಳುದಿಂಗಳಿಂದ ಕರಗುವ ಚಂದ್ರಶಿಲೆಯಂತೆ ನಿನ್ನ ಗುಣಗಳಿಂದ ಚಂದ್ರಮುಖಿ, ನಾಂದನಾಗಿ ನರೇಂದ್ರನು ನುಡಿಯಲೂ ಆರನಾಗಿದ್ದಾನೆ. ಹೋದೆಡೆಯನ್ನರಿಯದೆ ಬಿಡದೆ ಹುಡುಕುತ್ತ ಹೇಗಿರುವನೊ ಎನುತ್ತ ಉಮ್ಮಳದಿಂದ ಹಿಂದುಳಿದ ರಾಜಲೋಕವೆಲ್ಲ ಕುಮಾರನನ್ನು ಕಾಣುವವರೆಗೂ ಮರುಗದೆ ಇರದು.

ಕಮಲಿನಿಗೆ ಕಮಲಬಂಧುಗೆ
ಕುಮುದಿನಿಗೆ ಅಕುಮುದಿನೀಶ್ವರಂಗೆ ಎಂತೀಗಳ್

ತಮಗೆ ಅಂತಿರ್ಪೆಡೆಗಳ್ ದೂ
ರಮಾದೊಡಂ ಪ್ರೀತಿಮಾಣದು ಆಕಲ್ಪಾಂತಂ

ಆದರಿಂದ ಅರಸಂಗೆ ಪೋಗಲ್ವೇಳ್ಕುಂ'–ಎನ್ನುವಳು. ಈ ಪದ್ಯದ ಮಟ್ಟದಲ್ಲಿ ರಸಪೋಷಣೆ ಮಾಡುವ ಪದ್ಯಗಳು ಸಾಹಿತ್ಯದಲ್ಲಿ ಹಲವಿಲ್ಲ. ಹೋಗಲೇ ಬೇಕಾದ್ದರಿಂದ ಅಪ್ಪಣೆ ಬೇಡುತ್ತಾನೆ. ಒಂದುದಿನ ಮಟ್ಟಿಗೆ ಕಂಡ ನಮಗೇ ಅಗಲುವುದು ಹೀಗೆ ಕಷ್ಟವಾದರೆ ಜೊತೆಯವರು ಎಷ್ಟು ಕಾತರರಾಗಿದ್ದಾರು! ಅಪ್ಪಣೆಕೊಡುವುದು ನಿನಗೆಷ್ಟು ಕಷ್ಟವೊ ಕೇಳುವುದು ಆತನಿಗೂ ಅಷ್ಟೇ ಕಷ್ಟವೆಂದು ನನಗೆ ಗೊತ್ತಿದೆ. ಮಾಡುವುದೇನು? ಬೇರೆ ದಾರಿಯಿಲ್ಲ. ನಿಮಗೆ ಒಂದು ತತ್ವ ತಿಳಿಯಬೇಕು. ಪ್ರೇಮ ನಿಜವಾಗಿದ್ದ ಪಕ್ಷದಲ್ಲಿ ಅಗಲಿಕೆಯಿಂದ ಅದಕ್ಕೆ ಚ್ಯುತಿಬಾರದು. ಆಕಲ್ಪಾಂತಂ–ಕಲ್ಪಗಳು ಮುಗಿಯುವವರೆಗೂ ಅದು ನಿಲ್ಲುತ್ತದೆ. ಅಥವಾ ಬಾಣ ಹೇಳುವಂತೆ 'ಆಪ್ರಳಯಂ'–ವಿಶ್ವಕ್ಕೆ ಪ್ರಳಯ ಬಂದೀತು. ಪ್ರೀತಿ ಕುಂದದು ಇವಕ್ಕೆ ಪ್ರಮಾಣವೇನೆನ್ನುವಿರೋ? ನಾನು* ನೀವು ಯೋಚಿಸ ಕೆಲಸವಿಲ್ಲ. ನಿಮ್ಮ ಪ್ರೇಮ ನಿಮ್ಮನ್ನು ಎತ್ತುವುದು, ಉಳಿಸುವುದು. ಅಗಲಿ ದೂರವಿರುವುದು ನೋವು ಎಂಬುದು ನಿಜ. ನಾನು ಅನುಭವಿಸಿಲ್ಲವೆ? ಅನುಭವಿಸುತ್ತಿಲ್ಲವೆ? ಅಗಲಿಕೆಯಿಂದ ಪುಂಡರೀಕನಿಗೆ ಏನು ತಾಪಬರಲಿಲ್ಲ? ನನ್ನ ಜೊತೆಗೆ ಪ್ರಕೃತಿಯೂ ಇವಕ್ಕೆ ಸಾಕ್ಷಿ. ಪ್ರಕೃತಿಯಲ್ಲಿ ಇದರ ಸತ್ಯ ಸ್ಥಾಪಿತವಾಗಿದೆ. ಕುಮುದಕ್ಕೂ ಚಂದ್ರನಿಗೂ ಎಷ್ಟು ದೂರವಿಲ್ಲ? ಕಮಲಕ್ಕೂ ಸೂರ್ಯನಿಗೂ ಇನ್ನೆಷ್ಟಿಲ್ಲ? ಅವಕ್ಕಿರುವ

---

*ಆಕೆಯ ಮನಸ್ಸು, ತಿಳಿವಳಿಕೆ ಹಾಗಿವೆ. ಆ ವಿಶ್ವಾಸದಲ್ಲಿ ಬದುಕಿದ್ದಾಳೆ. ಪ್ರಳಯವನ್ನು ಲೆಕ್ಕಿಸದೆ ಶಾಶ್ವತವಾಗಿ ಪ್ರೀತಿಸಲು ವ್ರತಹೊತ್ತಿದ್ದಾಳೆ.

ಪ್ರೇಮ ಇವೊತ್ತಿನದೆ? ಇಲ್ಲವೆ ನಾಳೆಗೆ ಮುಗಿಯುವುದೊ? ಧ್ರುವ ಸತ್ಯವಲ್ಲವೆ? ಆಪ್ರಳಯಂ-ಅಂತಪ್ಪೆಡೆಗಳಲ್ಲಿ ಪ್ರೀತಿಮಾಣದು. ಚಿಂತೆ ಬೇಡ, ಕಳಿಸಿಕೊಡು ಎಂದು ಆಕೆ ನುಡಿಯುತ್ತಿದ್ದಾಳೆ. ಅಗಲಿ ಪ್ರಿಯನನ್ನು ಕಳೆದುಕೊಂಡು ದುಃಖವನ್ನನುಭವಿಸುತ್ತಿರುವ ಆಕೆ ಈಗ ಯಜಮಾನಿಯಾಗಿ ಕೆಲಸ ಮಾಡಬೇಕಾಗಿದೆ; ಮಾಡುತ್ತಾಳೆ. ಅರಿಯದ ಹುಡುಗಿಯನ್ನು ಪ್ರೇಮದ ತೊಡರಿಗೆ ತಾನಾಗಿ ಸಿಕ್ಕಿಹಾಕಿ, ಇದರಿಂದ ಇನ್ನು ಯಾವನೋವು ಹುಟ್ಟಿಕೊಳ್ಳುವುದೊ ಎಣಿಸವೆ, ಪ್ರಿಯರ ಅಗಲಿಕೆಗೆ ಕರಗಹೊತ್ತಳೆಂಬಂತೆ ಅಗಲಿಕೆಗೆ ಅಪ್ಪಣೆ ಕೊಡೆಂದು ಪ್ರಾಣಸಮಾನಳಾದ ಗೆಳತಿಯನ್ನು ಕೇಳುತ್ತಿದ್ದಾಳೆ. ಇದು ಎಂತಹ ಪ್ರಸಂಗ! ಕಮಲ ಸೂರ್ಯರ, ನೈದಿಲೆಚಂದ್ರರ ಸಾಮ್ಯಸಾಹಿತ್ಯ ಹುಟ್ಟಿದಂದಿನಿಂದ ಬಂದು ಬಂದು ಅವರಶಕ್ತಿ ಸವೆದುಹೋಗಿದೆ. ಆದರೆ ಇಲ್ಲಿ ಎಂತಹ ಪ್ರಮಾಣವಾಗುತ್ತಿದೆ ಅವುಗಳ ಶಾಶ್ವತ ಸಂಬಂಧ! ಅದರ ಸಮಾನವಾದಅಮೃತ ಸತ್ವ, ತನ್ನ ಪುಂಡರೀಕರ ಪ್ರೇಮ; ಕಾದಂಬರಿ ಚಂದ್ರಾಪೀಡರ ಪ್ರೇಮಾನುಬಂಧ. ಅಷ್ಟೇ ಸತ್ಯ, ಗಾಢ. ಈ ಸಂಗತಿ ಸನ್ನಿವೇಶಕ್ಕೆ ತಿಳಿವಿನ ಬೆಳಕನ್ನು ಬೀರಿ ತಾಳ್ಮೆ ಬೇಡುತ್ತದೆ. ಮೂರು ಅನಂತ ಪ್ರಪಂಚಗಳ ಕೆಳೆಸಾಮ್ಯವನ್ನು ಸೃಷ್ಟಿಮಾಡಿ ಅರ್ಥ ಬೆಳೆದು ನಿಲ್ಲುವುದು. ಭೂಮಿ ಆಕಾಶಗಳನ್ನೂ ಮಾನವ ಜೀವವನ್ನೂ ಜೀವನದ ಪ್ರೇಮವನ್ನೂ ಒಂದೇ ಬಗೆಯ ಸತ್ವವೆಂದು ತೋರಿಸಿ ಕೊಡುವುದು. ಭಾವಪೋಷಣೆ ಮಾಡುವುದು. ಚಾರಿತ್ರಗಳಿಗೆ ಸ್ಥೈರ್ಯ ತಂದುಕೊಡುವುದು.

ಕವಿಶಕ್ತಿ ಇದಕ್ಕಿಂತ ಮೀರಿದುದಾವುದನ್ನು ಮಾಡಬಲ್ಲದು? ಈ ಬಗೆಯ ವ್ಯಕ್ತಿ, ಉಕ್ತಿಗಳಿಂದಲೇ ಕಾವ್ಯ ಸಫಲತೆ ಹೊಂದುವುದು.

## ಮೈಸೂರು ವಿಶ್ವವಿದ್ಯಾನಿಲಯ

# ಪ್ರಚಾರಪುಸ್ತಕಮಾಲೆ

### ೧೯೩೮-೩೯ ರಲ್ಲಿ ಅಚ್ಚಾಗಿರುವ ಪುಸ್ತಕಗಳು:

ಸಾಧಾರಣ ಪ್ರತಿ ಒಂದಕ್ಕೆ ೨ ಆಣೆ, ಉತ್ತಮ ಪ್ರತಿ ಒಂದಕ್ಕೆ ೩ ಆಣೆ.

೧. **ಖಗೋಳಶಾಸ್ತ್ರ ಪ್ರವೇಶ**—
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.

೨. **ಸಮಾಜದ ರೋಗ ರುಜಿನಗಳು**—
ಜಿ. ಹನುಮಂತರಾವ್, ಎಂ.ಎ.

೩. **ತೆರಿಗೆ**—ಬಿ. ಆರ್. ಸುಬ್ಬರಾವ್, ಎಂ.ಎ.

೪. **ನವರತ್ನಗಳು**—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.

೫. **ನಮ್ಮ ಹಳ್ಳಿಗಳು**—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.

### ೧೯೩೯-೪೦ ರಲ್ಲಿ ಅಚ್ಚಾಗಿರುವ ಪುಸ್ತಕಗಳು:

೬. **ಕುಮಾರವ್ಯಾಸ**—ಎಸ್. ವಿ. ರಂಗಣ್ಣ, ಎಂ.ಎ.

೭. **ಹಂಪೆಯ ಹರಿಹರ**—ಡಿ. ಎಲ್. ನರಸಿಂಹಾಚಾರ್, ಎಂ.ಎ.

೮. **ಕನ್ನಡಸಾಹಿತ್ಯ**—ಕೆ. ವೆಂಕಟರಾಮಪ್ಪ, ಎಂ.ಎ.

೯. **ವಿದ್ಯುಚ್ಛಕ್ತಿಯ ವೈಭವ**—ಬಿ. ಎ. ಕೃಷ್ಣಸ್ವಾಮಿರಾವ್,
ಎಂ.ಎಸ್‌ಸಿ.

(ಪು. ತಿ. ನೋ.)

೧೦. ಪಂಪ—ತೀ. ನಂ. ಶ್ರೀಕಂಠಯ್ಯ, ಎಂ.ಎ.

೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.

೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.

೧೩. ಮದುವೆ—ನಾ. ಕಸ್ತೂರಿ, ಎಂ.ಎ., ಬಿ.ಎಲ್.

೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.

೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.

೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.

೧೭. ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.

೧೯೪೦-೪೧ ರಲ್ಲೂ ಹನ್ನೆರಡು ಪುಸ್ತಕಗಳು ಅಚ್ಚಾಗುವುವು:

ಸಾಧಾರಣ ಪ್ರತಿ ೨ ಆಣೆ; ವಾರ್ಷಿಕ ಚಂದಾ ರೂ. ೧-೪-೦;
ಉತ್ತಮ ಪ್ರತಿ ೩ ಆಣೆ; ವಾರ್ಷಿಕ ಚಂದಾ ರೂ. ೨-೦-೦.

ವಿ. ಪಿ. ಮೂಲಕ ಪುಸ್ತಕಗಳನ್ನು ತರಿಸಿಕೊಳ್ಳುವುದರ ಬದಲು ಮುಂಗಡವಾಗಿ ಹಣವನ್ನು ಕಳುಹಿಸಿ ತರಿಸಿಕೊಂಡರೆ ನಾಲ್ಕು ಆಣೆಗಳು ಉಳಿತಾಯವಾಗುವುವು.